# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 103
ವಿಧಾನಸಭಾ ಸದಸ್ಯರ ಹೆಸರು : ಶ್ರೀ ಪುಟ್ಟರಂಗಶೆಟ್ಟಿ ಸಿ. (ಚಾಮರಾಜನಗರ)
ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು
ಉತ್ತರಿಸುವ ದಿನಾಂಕ : 24.02.2023

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಚಾಮರಾಜನಗರ ಜಿಲ್ಲೆಯಲ್ಲಿ ಹೊಸ ಕೈಗಾರಿಕೆಗಳನ್ನು ಸ್ಥಾಪಿಸುವ ಯೋಜನೆ ಸರ್ಕಾರದ ಮುಂದಿದೆಯೇ; | ಸರ್ಕಾರದಿಂದ ನೇರವಾಗಿ ಯಾವುದೇ ಕೈಗಾರಿಕೆಗಳನ್ನು ಸ್ಥಾಪಿಸುವುದಿಲ್ಲ.<br><br>ಆದಾಗ್ಯೂ, ಖಾಸಗಿ ಕೈಗಾರಿಕೋದ್ಯಮಿಗಳು ಕೈಗಾರಿಕೆಗಳನ್ನು ಸ್ಥಾಪಿಸುವುದನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಚಾಮರಾಜನಗರ ಜಿಲ್ಲೆಯ ಬದನಗುಪ್ಪೆ-ಕೆಲ್ಲಂಬಳ್ಳಿಯಲ್ಲಿ 1460.47 ಎಕರೆ ವಿಸ್ತೀರ್ಣದಲ್ಲಿ ಕೈಗಾರಿಕಾ ಪ್ರದೇಶವನ್ನು ಅಭಿವೃದ್ಧಿಪಡಿಸಲಾಗಿದೆ. |
| ಆ | ಹಾಗಿದ್ದಲ್ಲಿ, ಅಲ್ಲಿನ ಯುವ ಜನತೆಯ ನಿರುದ್ಯೋಗ ಸಮಸ್ಯೆಯನ್ನು ನಿವಾರಿಸಲು ಹಾಗೂ ಕೈಗಾರಿಕೆಗಳ ಅಭಿವೃದ್ಧಿಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; (ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಲ್ಲಿ ಸಮಗ್ರ ಹಾಗೂ ಸಮತೋಲನಾ ಕೈಗಾರಿಕಾ ಅಭಿವೃದ್ಧಿಗಾಗಿ ಕೈಗಾರಿಕಾ ನೀತಿ 2020-25 ರಡಿ ಈ ಕೆಳಕಂಡಂತೆ ರಿಯಾಯಿತಿ ಮತ್ತು ಪ್ರೋತ್ಸಾಹಗಳನ್ನು ನೀಡಿ ಕೈಗಾರಿಕೆಗಳ ಸ್ಥಾಪನೆಗೆ ಉತ್ತೇಜಿಸಲಾಗುತ್ತಿದೆ.<br><br>1. ಮುದ್ರಾಂಕ ಶುಲ್ಕ ವಿನಾಯಿತಿ ಹಾಗೂ ನೋಂದಣಿ ಶುಲ್ಕ ರಿಯಾಯಿತಿ<br>2. ವಹಿವಾಟು ಆಧರಿಸಿ ಹೂಡಿಕೆ ಉತ್ತೇಜನ ಸಹಾಯಧನ<br>3. ಭೂ ಪರಿವರ್ತನಾ ಶುಲ್ಕ ಮರುಪಾವತಿ.<br>4. ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗೆ ವಿದ್ಯುತ್ ಶುಲ್ಕದ ಮೇಲಿನ ತೆರಿಗೆ ವಿನಾಯಿತಿ<br>5. ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳಿಗೆ ವಿದ್ಯುತ್ ಸಹಾಯಧನ<br>6. ತ್ಯಾಜ್ಯ ಸಂಸ್ಕರಣಾ ಘಟಕಗಳ ಸ್ಥಾಪನೆಗೆ ಸಹಾಯಧನ<br>7. ಖಾಸಗಿ ಹೂಡಿಕೆದಾರರಿಂದ ಸಾಮಾನ್ಯ ತ್ಯಾಜ್ಯ ಸಂಸ್ಕರಣಾ ಘಟಕ (CETP)/ ಕೈಗಾರಿಕೆಗಳ ಅಪಾಯಕಾರಿ ತ್ಯಾಜ್ಯ ವಿಲೇವಾರಿ ಯೋಜನೆಗಳಿಗೆ ಸಹಾಯಧನ<br>8. ಅಂಕರ್ ಘಟಕ ಸಹಾಯಧನ ಇತ್ಯಾದಿ |

| | | |
|---|---|---|
| ಇ | ಅಲ್ಲಿನ ಸ್ಥಳೀಯ ಯುವ ಜನತೆಗೆ ಉದ್ಯೋಗ ನೀಡಲು ಅನುಸರಿಸಲಾಗುತ್ತಿರುವ ಮಾನದಂಡಗಳೇನು; | ಕೈಗಾರಿಕಾ ನೀತಿ 2020-25ರ ಅಡಿಯಲ್ಲಿ ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ಪಡಯುವ ಕೈಗಾರಿಕೆಗಳಿಗೆ ಉದ್ಯೋಗ/ ನೇಮಕಾತಿ ಮಾನದಂಡಗಳು ಈ ಕೆಳಗಿನಂತಿವೆ:<br>• ಎಲ್ಲಾ ಹೊಸ ಕೈಗಾರಿಕಾ ಹೂಡಿಕೆ ಯೋಜನೆಗಳು ಸಾಧ್ಯವಾದಷ್ಟು ಅತಿ ಹೆಚ್ಚು ನೇರ ಉದ್ಯೋಗಾವಕಾಶಗಳನ್ನು ಸೃಜಿಸಬೇಕು. ಈ ಕೈಗಾರಿಕೆಗಳಲ್ಲಿ ಗ್ರೂಪ್ 'ಡಿ' ಉದ್ಯೋಗಗಳು 100% ರಷ್ಟು, ಒಟ್ಟಾರೆ ಕನಿಷ್ಠ 70% ರಷ್ಟು ಉದ್ಯೋಗಾವಕಾಶಗಳನ್ನು ಸ್ಥಳೀಯರಿಗೆ ನೀಡಬೇಕು. |
| ಈ | ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕೈಗಾರಿಕೆಗಳೆಷ್ಟು? (ಜಿಲ್ಲಾವಾರು ವಿವರ ನೀಡುವುದು) | ಚಾಮರಾಜನಗರ ಜಿಲ್ಲೆಯಲ್ಲಿ 7308 ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಹಾಗೂ 05 ಮಧ್ಯಮ ಕೈಗಾರಿಕೆಗಳು ನೋಂದಣಿಯಾಗಿರುತ್ತದೆ.<br>ಚಾಮರಾಜನಗರ ಜಿಲ್ಲೆಯಲ್ಲಿ 02 ಬೃಹತ್ ಕೈಗಾರಿಕೆಗಳು ಕಾರ್ಯನಿರ್ವಹಿಸುತ್ತಿವೆ. |

ಸಿಐ 47 ಎಸ್‌ಪಿಐ 2023

(ಡಾ. ಮುರುಗೇಶ ಆರ್. ನಿರಾಣಿ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 104

ಸದಸ್ಯರ ಹೆಸರು : ಶ್ರೀ ಪುಟ್ಟರಂಗಶೆಟ್ಟಿ ಸಿ. (ಚಾಮರಾಜನಗರ)

ಉತ್ತರಿಸಬೇಕಾದ ದಿನಾಂಕ : 24-02-2023

ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಚಾಮರಾಜನಗರ ಜಿಲ್ಲೆಯಲ್ಲಿ ಇರುವ ಒಟ್ಟು ಅಂಗನವಾಡಿಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ಚಾಮರಾಜನಗರ ಜಿಲ್ಲೆಯಲ್ಲಿ ಒಟ್ಟು 1425 ಅಂಗನವಾಡಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿದೆ. ತಾಲ್ಲೂಕುವಾರು ವಿವರ ಕೆಳಕಂಡಂತಿವೆ.<br>1. ಚಾಮರಾಜನಗರ-437<br>2. ಕೊಳ್ಳೆಗಾಲ-425<br>3. ಹನೂರು-264<br>4. ಗುಂಡ್ಲುಪೇಟೆ-299 |
| ಆ. | ರಾಜ್ಯಾದ್ಯಂತ ಪ್ರತಿಯೊಂದು ಅಂಗನವಾಡಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳೆಷ್ಟು; ಅವರಿಗೆ ಪ್ರತಿ ತಿಂಗಳಿಗೆ ನೀಡುತ್ತಿರುವ ಸಂಬಳ ಎಷ್ಟು; | ರಾಜ್ಯದಲ್ಲಿ 64729 ಅಂಗನವಾಡಿ ಕಾರ್ಯಕರ್ತೆಯರು ಹಾಗೂ 59627 ಸಹಾಯಕಿಯರು ಕರ್ತವ್ಯ ನಿರ್ವಹಿಸುತ್ತಿದ್ದಾರೆ.<br>ಪ್ರಸ್ತುತ ಅಂಗನವಾಡಿ ಕಾರ್ಯಕರ್ತೆ, ಮಿನಿ ಅಂಗನವಾಡಿ ಕಾರ್ಯಕರ್ತೆ ಮತ್ತು ಅಂಗನವಾಡಿ ಸಹಾಯಕಿಯರಿಗೆ ನೀಡಲಾಗುತ್ತಿರುವ ಮಾಸಿಕ ಗೌರವಧನ ಈ ಕೆಳಕಂಡಂತಿರುತ್ತದೆ:- |

| ವಿವರ | ವಿಂಗಡನೆ | ಕೇಂದ್ರ ಸರ್ಕಾರವು ನಿಗದಿಪಡಿಸಿರುವ ಗೌರವಧನ | ರಾಜ್ಯ ಸರ್ಕಾರದಿಂದ ಹೆಚ್ಚುವರಿಯಾಗಿ ನೀಡುತ್ತಿರುವ ಗೌರವಧನ | ಒಟ್ಟು |
|---|---|---|---|---|
| **ಅಂಗನವಾಡಿ ಕಾರ್ಯಕರ್ತೆ** | 10 ವರ್ಷಕ್ಕಿಂತ ಕಡಿಮೆ ವರ್ಷ ಸೇವೆ ಸಲ್ಲಿಸಿದವರಿಗೆ | 4500 | 6500 | 11000 |
| | 10 ರಿಂದ 20 ವರ್ಷ ಸೇವೆ ಸಲ್ಲಿಸಿದವರಿಗೆ | | 6750 | 11250 |
| | 20 ಕ್ಕಿಂತ ಹೆಚ್ಚು ಸೇವೆ ಸಲ್ಲಿಸಿದವರಿಗೆ | | 7000 | 11500 |
| **ಅಂಗನವಾಡಿ ಸಹಾಯಕಿ** | 10 ವರ್ಷಕ್ಕಿಂತ ಕಡಿಮೆ ವರ್ಷ ಸೇವೆ ಸಲ್ಲಿಸಿದವರಿಗೆ | 2500 | 3750 | 6250 |
| | 10 ರಿಂದ 20 ವರ್ಷ ಸೇವೆ ಸಲ್ಲಿಸಿದವರಿಗೆ | | 4000 | 6500 |
| | 20 ಕ್ಕಿಂತ ಹೆಚ್ಚು ಸೇವೆ ಸಲ್ಲಿಸಿದವರಿಗೆ | | 4250 | 6750 |
| **ಮಿನಿ ಅಂಗನವಾಡಿ ಕಾರ್ಯಕರ್ತೆ** | 10 ವರ್ಷಕ್ಕಿಂತ ಕಡಿಮೆ ವರ್ಷ ಸೇವೆ ಸಲ್ಲಿಸಿದವರಿಗೆ | 3500 | 3750 | 7250 |
| | 10 ರಿಂದ 20 ವರ್ಷ ಸೇವೆ ಸಲ್ಲಿಸಿದವರಿಗೆ | | 4000 | 7500 |
| | 20 ಕ್ಕಿಂತ ಹೆಚ್ಚು ಸೇವೆ ಸಲ್ಲಿಸಿದವರಿಗೆ | | 4250 | 7750 |

| | | |
|---|---|---|
| ಇ. | ಅಂಗನವಾಡಿ ಕಾರ್ಯಕರ್ತೆಯರು/ ಸಹಾಯಕಿಯರನ್ನು ನೇಮಕ ಮಾಡಿಕೊಳ್ಳಲು ಅನುಸರಿಸಲಾಗುತ್ತಿರುವ ಮಾನದಂಡಗಳೇನು; (ಸಂಪೂರ್ಣ ವಿವರ ನೀಡುವುದು) | ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರನ್ನು ನೇಮಕ ಮಾಡಲು ದಿನಾಂಕ:03.12.2022ರ ಆದೇಶದಲ್ಲಿ ಪರಿಷ್ಕೃತ ಮಾರ್ಗಸೂಚಿ ಹೊರಡಿಸಿದೆ. ಸದರಿ ಆದೇಶದಲ್ಲಿ ಅನುಸರಿಸಬೇಕಾದ ಮಾನದಂಡಗಳ ಬಗ್ಗೆ ತಿಳಿಸಲಾಗಿರುತ್ತದೆ. ಮಾನದಂಡಗಳ ಆದೇಶವನ್ನು **ಅನುಬಂಧ-1 ರಲ್ಲಿ** ಒದಗಿಸಿದೆ. |
| ಈ | 2020-21 ಮತ್ತು 2021-22ನೇ ಸಾಲಿನಲ್ಲಿ ಜಿಲ್ಲೆಯ ಅಂಗನವಾಡಿ ಕಟ್ಟಡಗಳ ದುರಸ್ಥಿಗಾಗಿ ಬಿಡುಗಡೆಯಾದ ಒಟ್ಟು ಅನುದಾನವೆಷ್ಟು; | ಚಾಮರಾಜನಗರ ಜಿಲ್ಲೆಯ ಅಂಗನವಾಡಿ ಕಟ್ಟಡಗಳ ದುರಸ್ಥಿ/ ಉನ್ನತೀಕರಣಕ್ಕಾಗಿ ತಾಲ್ಲೂಕು ಪಂಚಾಯತ್ / ಜಿಲ್ಲಾ ಪಂಚಾಯತ್ ವಲಯಗಳಲ್ಲಿ ಈ ಕೆಳಕಂಡಂತೆ ಅನುದಾನ ಬಿಡುಗಡೆ ಮಾಡಲಾಗಿದೆ. **(ರೂ.ಲಕ್ಷಗಳಲ್ಲಿ)** |
| ಉ. | ಜಿಲ್ಲೆಯ ಪ್ರತಿಯೊಂದು ವಿಧಾನಸಭಾ ಕ್ಷೇತ್ರಗಳ ಅಂಗನವಾಡಿಗಳಿಗೆ ದುರಸ್ಥಿಗಾಗಿ ಬಿಡುಗಡೆಗೊಳಿಸಲಾಗಿರುವ ಮೊತ್ತವೆಷ್ಟು? (ಗ್ರಾಮವಾರು/ಕ್ಷೇತ್ರವಾರು ಸಂಪೂರ್ಣ ವಿವರ ನೀಡುವುದು) | ಜಿಲ್ಲೆಯ ಪ್ರತಿಯೊಂದು ವಿಧಾನಸಭಾ ಕ್ಷೇತ್ರಗಳ ಅಂಗನವಾಡಿಗಳಿಗೆ ದುರಸ್ಥಿಗಾಗಿ ಬಿಡುಗಡೆಗೊಳಿಸಲಾಗಿರುವ ಮೊತ್ತದ ಮಾಹಿತಿಯನ್ನು **ಅನುಬಂಧ-2 ರಲ್ಲಿ** ಒದಗಿಸಿದೆ. |

| ತಾಲ್ಲೂಕು ಪಂಚಾಯಿತಿ ವಲಯ | | ಜಿಲ್ಲಾ ಪಂಚಾಯಿತಿ ವಲಯ | |
|---|---|---|---|
| 2020-21 | 2021-22 | 2020-21 | 2021-22 |
| 85.00 | 85.00 | 27.00 | 25.00 |

**ಸಂಖ್ಯೆ:ಮಮಇ 52 ಐಸಿಡಿ 2023**

Halappa

**(ಆಚಾರ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ವಿಕಲಚೇತನರ ಹಾಗೂ
ಹಿರಿಯ ನಾಗರೀಕರ ಸಬಲೀಕರಣ ಸಚಿವರು.

5/2/3348
07/12/22

## ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಅಂಗನವಾಡಿ ಕಾರ್ಯಕರ್ತೆಯರ/ಸಹಾಯಕಿಯರನ್ನು ಆಯ್ಕೆ ಮಾಡಲು ಹೊರಡಿಸಿದ ಮಾರ್ಗಸೂಚಿಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಮಮಇ 237 ಐಸಿಡಿ 2012, ದಿನಾಂಕ: 15-06-2012.
2. ಸರ್ಕಾರದ ಆದೇಶ ಸಂಖ್ಯೆ: ಮಮಇ 89 ಐಸಿಡಿ 2014, ದಿನಾಂಕ: 19-04-2014.
3. ಸರ್ಕಾರದ ಆದೇಶ ಸಂಖ್ಯೆ: ಮಮಇ 303 ಐಸಿಡಿ 2017, ದಿನಾಂಕ: 23-09-2017.
4. ಸರ್ಕಾರದ ಸೇರ್ಪಡೆ ಆದೇಶ ಸಂಖ್ಯೆ: ಮಮಇ 27 ಐಸಿಡಿ 2017, ದಿನಾಂಕ: 01-12-2017.
5. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಮಮಇ 303 ಐಸಿಡಿ 2017, ದಿನಾಂಕ: 19-01-2019.
6. ಸರ್ಕಾರದ ಆದೇಶ ಸಂಖ್ಯೆ: ಮಮಇ 308 ಐಸಿಡಿ 2018, ದಿನಾಂಕ: 02-02-2019.
7. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಮಮಇ 303 ಐಸಿಡಿ 2017, ದಿನಾಂಕ: 15-06-2020.
8. ಸರ್ಕಾರದ ಆದೇಶ ಸಂಖ್ಯೆ: ಮಮಇ 154 ಐಸಿಡಿ 2020, ದಿನಾಂಕ: 31-12-2020.
9. ಸರ್ಕಾರದ ಆದೇಶ ತಿದ್ದುಪಡಿ ಆದೇಶ ಸಂಖ್ಯೆ: ಮಮಇ 152 ಐಸಿಡಿ 2021, ದಿನಾಂಕ: 01-06-2021.
10. ಸರ್ಕಾರದ ಆದೇಶ ಸಂಖ್ಯೆ: ಮಮಇ 154 ಐಸಿಡಿ 2020, ದಿನಾಂಕ: 07-02-2022.
11. ಸರ್ಕಾರದ ಆದೇಶ ಸಂಖ್ಯೆ: ಮಮಇ 190 ಐಸಿಡಿ 2021, ದಿನಾಂಕ: 05-03-2022.
12. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಮಮಇ 154 ಐಸಿಡಿ 2020, ದಿನಾಂಕ: 26-05-2022.
13. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಮಮಇ 154 ಐಸಿಡಿ 2020, ದಿನಾಂಕ: 26-05-2022.
14. ಸರ್ಕಾರದ ಆದೇಶ ಸಂಖ್ಯೆ: ಮಮಇ 154 ಐಸಿಡಿ 2020, ದಿನಾಂಕ: 26-05-2022.
15. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಏಕ ಕಡತ ಸಂಖ್ಯೆ:WCD/ICDS/ANG1/5/2022-DD ICDS-WOMEN AND CHILD DEVELOPMENT ದಿನಾಂಕ:27-10-2022.

15295
6/12/22

ICDS

Ant-1
7745
8/12/22

*****

**ಪ್ರಸ್ತಾವನೆ:**

ರಾಜ್ಯದಲ್ಲಿನ ಅಂಗನವಾಡಿ ಕೇಂದ್ರಗಳಿಗೆ ಅಂಗನವಾಡಿ ಕಾರ್ಯಕರ್ತೆಯರ/ ಸಹಾಯಕಿಯರನ್ನು ಆಯ್ಕೆ ಮಾಡಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ:15-06-2012ರ ಆದೇಶದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯನ್ನು ರಚಿಸಿ ಮಾರ್ಗಸೂಚಿಗಳನ್ನು ಹೊರಡಿಸಲಾಗಿತ್ತು ಹಾಗೂ ಸದರಿ ಮಾರ್ಗಸೂಚಿಗಳನ್ನು ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 19-04-2014ರ ಆದೇಶದಲ್ಲಿ ಪರಿಷ್ಕರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ರಾಜ್ಯದಲ್ಲಿನ ಅಂಗನವಾಡಿ ಕೇಂದ್ರಗಳಿಗೆ ಅಂಗನವಾಡಿ ಕಾರ್ಯಕರ್ತೆಯರ/ಸಹಾಯಕಿಯರ ಆಯ್ಕೆಯನ್ನು ಆನ್‌ಲೈನ್ ಮುಖಾಂತರ ಮಾಡಲು ಹಾಗೂ ತಿದ್ದುಪಡಿಗಳನ್ನು ಅಳವಡಿಸಿಕೊಂಡು ದಿನಾಂಕ: 19-04-2014ರ ಆದೇಶದಲ್ಲಿನ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಆದೇಶಿಸಲಾಗಿತ್ತು.

12/12/22

ಮೇಲೆ ಓದಲಾದ ಕ್ರಮ ಸಂಖ್ಯೆ (15)ರ ಏಕ ಕಡತದಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಮಾನ್ಯ ಇಲಾಖಾ ಸಚಿವರು ರಾಜ್ಯದಲ್ಲಿನ ಅಂಗನವಾಡಿ ಕೇಂದ್ರಗಳಿಗೆ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರನ್ನು ಆಯ್ಕೆ ಮಾಡಲು ದಿನಾಂಕ: 23/09/2017 ರ ಮಾರ್ಗಸೂಚಿಗಳನ್ನು ಮತ್ತು ಅರ್ಹತಾ ಮಾನದಂಡಗಳನ್ನು ಪರಿಷ್ಕರಿಸಲು ಕ್ರಮ ಕೈಗೊಳ್ಳಲು ಸೂಚಿಸಿರುವ ಹಿನ್ನೆಲೆಯಲ್ಲಿ, ಅಂಗನವಾಡಿ ಕಾರ್ಯಕರ್ತೆಯರ /ಸಹಾಯಕಿಯರನ್ನು ಆಯ್ಕೆ ಮಾಡಲು ಹೊರಡಿಸಲಾದ ಕ್ರಮ ಸಂಖ್ಯೆ (4) ರಿಂದ (14)ರಲ್ಲಿ ಓದಲಾದ ಆದೇಶಗಳಲ್ಲಿ ಕೆಲವು ಸೇರ್ಪಡೆ ಮತ್ತು ತಿದ್ದುಪಡಿಗಳನ್ನು ಮಾಡಿರುವುದರಿಂದ ಅವುಗಳನ್ನು ಅಳವಡಿಸಿಕೊಂಡು ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರ ನೇಮಕಾತಿಯನ್ನು ಆನ್‌ಲೈನ್ ಮುಖಾಂತರ ಮಾಡಲು ಅನುಕೂಲವಾಗುವಂತೆ ಮಾರ್ಗಸೂಚಿಗಳನ್ನು ಪರಿಷ್ಕರಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**<u>ಸರ್ಕಾರದ ಆದೇಶ ಸಂಖ್ಯೆ: ಮಮಇ 154 ಐಸಿಡಿ 2020, ಬೆಂಗಳೂರು,</u>**
**<u>ದಿನಾಂಕ: 03-12-2022</u>**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿನ ಅಂಗನವಾಡಿ ಕೇಂದ್ರಗಳಿಗೆ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಆಯ್ಕೆಯನ್ನು ಆನ್‌ಲೈನ್ ಮುಖಾಂತರ ನಡೆಸಲು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ದಿನಾಂಕ: 23-09-2017 ಆದೇಶದಲ್ಲಿನ ಮಾರ್ಗಸೂಚಿಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಪರಿಷ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

**(ನಿರ್ಮಲಾ ಎಸ್. ಖಟಾವ್‌ಕರ್)**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗು ವಿಕಲಚೇನತರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ

<u>ಇವರಿಗೆ:</u>

1. ಪ್ರಧಾನ ಮಹಾಲೇಖಪಾಲರು (ಎ & ಇ), ಕರ್ನಾಟಕ, ಪಾರ್ಕ್‌ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂ:5398, ಬೆಂಗಳೂರು.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಆಬಿವೃದ್ಧಿ ಇಲಾಖೆ, ಬೆಂಗಳೂರು.
3. ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು .
4. ಎಲ್ಲಾ ಜಿಲ್ಲೆಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಜಿಲ್ಲಾ ಪಂಚಾಯತ್.
5. ಎಲ್ಲಾ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಹಣಾಧಿಕಾರಿಗಳು.
6. ಎಲ್ಲಾ ಆಯ್ಕೆ ಸಮಿತಿಯ ಸದಸ್ಯರು.
7. ಎಲ್ಲಾ ಜಿಲ್ಲಾ ಉಪನಿರ್ದೇಶಕರುಗಳು ಮತ್ತು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.
8. ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
9. ಸರ್ಕಾರದ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಆಪ್ತ ಕಾರ್ಯದರ್ಶಿ.
10. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು
(ಕ್ರ.ಸಂ. 3-7 ನಿರ್ದೇಶನಾಲಯದ ಮುಖಾಂತರ)

## ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕಿಯರನ್ನು ಆಯ್ಕೆ ಮಾಡಲು ಹೊರಡಿಸಿದ ಮಾರ್ಗಸೂಚಿಗಳನ್ನು ಪರಿಷ್ಕರಿಸುವ ಕುರಿತು.

### ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಆಯ್ಕೆಯ ಮಾನದಂಡಗಳು

I. **ಅರ್ಹತೆ:** ಮಹಿಳೆಯರು ಹಾಗೂ ಲಿಂಗತ್ವ ಅಲ್ಪಸಂಖ್ಯಾತ ಮಹಿಳೆಯರು ಅರ್ಜಿ ಸಲ್ಲಿಸಲು ಅರ್ಹರಿರುತ್ತಾರೆ.

II. **ವಯೋಮಿತಿ:**

ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರ ಹುದ್ದೆಗೆ ಅರ್ಜಿ ಸಲ್ಲಿಸಲು 19-35 ವರ್ಷ ವಯೋಮಿತಿಯೊಳಗಿನ ಹೆಣ್ಣು ಮಕ್ಕಳು ಹಾಗೂ ಮಹಿಳಾ ಲಿಂಗತ್ವ ಅಲ್ಪಸಂಖ್ಯಾತರು ಅರ್ಜಿ ಸಲ್ಲಿಸಬಹುದು ಹಾಗೂ ವಿಕಲಚೇತನರಿಗೆ 10 ವರ್ಷಗಳ ವಯೋಮಿತಿ ಸಡಿಲಿಕೆ ಇರುತ್ತದೆ.

III. **ಸ್ಥಳೀಯತೆ:**

1. ಗ್ರಾಮಾಂತರ ಪ್ರದೇಶದ ಅಂಗನವಾಡಿ ಕೇಂದ್ರವಾದಲ್ಲಿ ಆಯಾ ಕಂದಾಯ ಗ್ರಾಮದಲ್ಲಿ ವಾಸ್ತವ್ಯ ಹೊಂದಿರಬೇಕು. ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರ ಆಯ್ಕೆಗೆ ಸ್ಥಳೀಯ ಮಜಿರೆ, ತಾಂಡಾ ಹಾಗೂ ಹಾಡಿಗೆ ಸೇರಿದವರಾಗಿದ್ದರೆ ಸಂಬಂಧಿಸಿದ ವಾಸ್ತವ್ಯ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆಯುವುದು.
2. ನಗರ ಪ್ರದೇಶದ ಅಂಗನವಾಡಿ ಕೇಂದ್ರವಾದಲ್ಲಿ ಆಯಾ ಕಂದಾಯ ವಾರ್ಡ್‌ನಲ್ಲಿ ವಾಸ್ತವ್ಯ ಹೊಂದಿರಬೇಕು ಹಾಗೂ ವಾಸ್ತವ್ಯ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದಿರಬೇಕು. [ಚುನಾವಣಾ ವಾರ್ಡ್‌ಗಳನ್ನು ಪರಿಗಣಿಸುವಂತಿಲ್ಲ]
3. ತಹಶೀಲ್ದಾರ್ / ಉಪ ತಹಶೀಲ್ದಾರ್‌ರವರ ಮೂರು ವರ್ಷದ ವಾಸ್ತವ್ಯ ದೃಢೀಕರಣದೊಂದಿಗೆ ಸ್ಥಳೀಯರು ಎಂಬುದನ್ನು ದೃಢೀಕರಿಸಲು ಪೂರಕ ದಾಖಲೆಗಳಾಗಿ ಆಧಾರ ಕಾರ್ಡ್, ರೇಷನ್ ಕಾರ್ಡ್ ಮತದಾರರ ಗುರುತಿನ ಚೀಟಿಗಳನ್ನು ಪಡೆಯುವುದು. ಮಜಿರೆ, ತಾಂಡಾ ಹಾಗೂ ಹಾಡಿಗೆ ಸೇರಿದವರಾಗಿದ್ದರೆ ಸಂಬಂಧಿಸಿದ ವಾಸ್ತವ್ಯ ಪ್ರಮಾಣ ಪತ್ರ ಪಡೆಯುವುದು.

IV. **ಅಂಗನವಾಡಿ ಕಾರ್ಯಕರ್ತೆ ಹುದ್ದೆಗೆ ವಿದ್ಯಾರ್ಹತೆ:-**

1. ಕನಿಷ್ಟ P.U.C. ತೇರ್ಗಡೆ ಹೊಂದಿರಬೇಕು. S.S.L.C.ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಓದಿರಬೇಕು.
2. ಅಂಗನವಾಡಿ ಕಾರ್ಯಕರ್ತೆಯರ ನೇಮಕಾತಿ ಸಂದರ್ಭದಲ್ಲಿ "ಸರ್ಕಾರದ ಅಂಗೀಕೃತ ಸಂಸ್ಥೆಗಳಿಂದ D.S.E.R.T.ಯಿಂದ ECCE ಡಿಪ್ಲೊಮಾ ಕೋರ್ಸ್, JOC ಕೋರ್ಸ್, N.T.T. ಕೋರ್ಸ್‌ಗಳನ್ನು ಹಾಗೂ ಅಂಗನವಾಡಿ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಡಿಪ್ಲೊಮಾ ನ್ಯೂಟ್ರಿಷಿಯನ್, ಹೋಂ ಸೈನ್ಸ್ ಸರ್ಟಿಫಿಕೇಟ್ ಕೋರ್ಸ್, ಒಂದು ವರ್ಷದ ನರ್ಸರಿ ಅಥವಾ ಪೂರ್ವ ಪ್ರಾಥಮಿಕ ತರಬೇತಿ ಪಡೆದು ಪ್ರಮಾಣ ಪತ್ರ ಹೊಂದಿದವರಿಗೆ ಮೊದಲ ಆದ್ಯತೆ ನೀಡುವುದು ಹಾಗೂ ಸದರಿಯವರಿಗೆ ಬೋನಸ್ +5 ಅಂಕಗಳನ್ನು ನೀಡುವುದು.

V. **ಅಂಗನವಾಡಿ ಸಹಾಯಕಿ ವಿದ್ಯಾರ್ಹತೆ:-** ಹುದ್ದೆಗೆ ಕನಿಷ್ಠ ವಿದ್ಯಾರ್ಹತೆ SSLC ಅಥವಾ ತತ್ಸಮಾನ ತರಗತಿಯಲ್ಲಿ ಉತ್ತೀರ್ಣವಾಗಿರಬೇಕು.

**ಅ)** ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಮುಕ್ತ ಶಾಲೆ/ಮುಕ್ತ ವಿದ್ಯಾಲಯಗಳಲ್ಲಿ S.S.L.C. ತೇರ್ಗಡೆ ಹೊಂದಿದ ಅಭ್ಯರ್ಥಿಗಳು ಪ್ರಥಮ/ದ್ವಿತೀಯ ಭಾಷೆಯಾಗಿ ಕನ್ನಡ ಹಾಗೂ ಸಾಮಾನ್ಯ ಗಣಿತ ಮತ್ತು ಸಮಾಜ ಶಾಸ್ತ್ರ/ಸಮಾಜ ವಿಜ್ಞಾನ ವಿಷಯಗಳನ್ನು ಕಡ್ಡಾಯವಾಗಿ ವ್ಯಾಸಂಗ ಮಾಡಿದ್ದು ಪ್ರಮಾಣ ಪತ್ರ/ಅಂಕಪಟ್ಟಿಯು ಗರಿಷ್ಠ 625 ಕನಿಷ್ಠ 219 ಅಂಕಗಳನ್ನು ಹೊಂದಿದ್ದಲ್ಲಿ ಅಂತಹ ಅಭ್ಯರ್ಥಿಗಳನ್ನು ಪರಿಗಣಿಸತಕ್ಕದ್ದು.

**ಆ)** ಬೇರೆ ರಾಜ್ಯಗಳಲ್ಲಿ ವ್ಯಾಸಂಗ ಮಾಡಿದ್ದು, ಕನ್ನಡವನ್ನು ಪ್ರಥಮ/ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡಿದ್ದರೂ SSLC ಪರೀಕ್ಷೆಗೆ ಆ ರಾಜ್ಯದಲ್ಲಿ ನಿಗದಿಪಡಿಸಿದ ಗರಿಷ್ಠ ಹಾಗೂ ಕನಿಷ್ಠ ಅಂಕಗಳು ಹಾಗೂ ಕರ್ನಾಟಕ ರಾಜ್ಯದಲ್ಲಿ ನಿಗದಿಪಡಿಸಿದ ಗರಿಷ್ಠ ಹಾಗೂ ಕನಿಷ್ಠ ಅಂಕದಲ್ಲಿ ವ್ಯತ್ಯಾಸವಿದ್ದಲ್ಲಿ ಕರ್ನಾಟಕದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸತಕ್ಕದ್ದು.

**ಇ)** ಅಂಗನವಾಡಿ ಸಹಾಯಕಿಯರು ಯಾವುದೇ ಭಾಷಾ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ್ದರೂ ಹಾಗೂ ಯಾವುದೇ ರಾಜ್ಯದಲ್ಲಿ ವ್ಯಾಸಂಗ ಮಾಡಿದ್ದರೂ ಸಹಾ ಅವರು ಕನ್ನಡ ಭಾಷೆಯನ್ನು ಪ್ರಥಮ /ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು. ಹಾಗೂ ಮಾತೃಭಾಷೆ ಕನ್ನಡವಲ್ಲದೇ ಇರುವ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯು ಆಯ್ಕೆ ಸಮಯದಲ್ಲಿ ಸಂದರ್ಶನ ಏರ್ಪಡಿಸಿ ಹಾಗೂ ಅವಶ್ಯವಿದ್ದಲ್ಲಿ ಕನ್ನಡ ಭಾಷೆಯ ಜ್ಞಾನದ ಕುರಿತಂತೆ ಓದಿಸಿ, ಬರೆಸಿ ಅವರ ಕನ್ನಡ ಭಾಷಾ ಜ್ಞಾನವನ್ನು ಪರೀಕ್ಷಿಸಿ ಅವರನ್ನು ಆಯ್ಕೆ ಮಾಡುವ ಬಗ್ಗೆ ಸಮಿತಿಯವರು ನಿರ್ಧರಿಸುವುದು.

VI. **ಜನಸಂಖ್ಯಾ ಆಧಾರದ ಮೇಲೆ ಮೀಸಲಾತಿ :-**

ಅಂಗನವಾಡಿ ಕಾರ್ಯಕರ್ತೆ ಹಾಗೂ ಸಹಾಯಕಿ ಹುದ್ದೆಗೆ ಶೇ. 25 ರಷ್ಟು ಅಲ್ಪಸಂಖ್ಯಾತ ಸಮುದಾಯದ ಜನಸಂಖ್ಯೆ ಇರುವ ಪ್ರದೇಶದ ಅಂಗನವಾಡಿ ಕೇಂದ್ರಗಳಲ್ಲಿ ಕನ್ನಡ ಭಾಷೆಯೊಂದಿಗೆ ಆಯಾ ಅಲ್ಪಸಂಖ್ಯಾತ ಸಮುದಾಯದ ಭಾಷೆ ಬಲ್ಲವರನ್ನು ಕಾರ್ಯಕರ್ತೆ / ಸಹಾಯಕಿಯ ಹುದ್ದೆಗೆ ಆಯ್ಕೆ ಮಾಡುವುದು. ಅಂಗನವಾಡಿ ಕಾರ್ಯಕರ್ತೆ / ಸಹಾಯಕಿ ಹುದ್ದೆಗೆ ಅರ್ಜಿ ಸಲ್ಲಿಸಿದವರಲ್ಲಿ ಒಂದಕ್ಕಿಂತ ಹೆಚ್ಚು ಅಭ್ಯರ್ಥಿಗಳು ಸಮಾನ ಅಂಕಗಳಿಸಿದ್ದಲ್ಲಿ ವಯೋಹಿರಿತನವನ್ನು ಪರಿಗಣಿಸಬೇಕು. ವಯಸ್ಸು ಸಮಾನವಾಗಿದ್ದಲ್ಲಿ ವಿಧವೆಯರನ್ನು ಪರಿಗಣಿಸಬೇಕು.

VII) **ಅಂಗನವಾಡಿ ಕೇಂದ್ರಗಳ ವ್ಯಾಪ್ತಿ ಗುರುತಿಸುವಿಕೆ:**

1. ಒಂದು ಗ್ರಾಮದಲ್ಲಿ ಈಗಾಗಲೇ ಅಂಗನವಾಡಿ ಕೇಂದ್ರವಿದ್ದು ಪುನಃ ಬೇಡಿಕೆಗೆ ಅನುಸಾರವಾಗಿ ಹೊಸ ಕೇಂದ್ರವನ್ನು ಪ್ರಾರಂಭಿಸುತ್ತಿದ್ದಲ್ಲಿ ಹೊಸ ಕೇಂದ್ರ ಪ್ರಾರಂಭಿಸುವ ಪ್ರದೇಶದ (ವ್ಯಾಪ್ತಿಯ) ಜನಸಂಖ್ಯೆಯಲ್ಲಿ ಶೇ. 40ಕ್ಕಿಂತ ಹೆಚ್ಚು ಜನಸಂಖ್ಯೆ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದವರಿದ್ದಲ್ಲಿ ಆ ಅಂಗನವಾಡಿ ಕೇಂದ್ರಕ್ಕೆ ಸದರಿ ವರ್ಗದವರಿಗೆ ಕಾರ್ಯಕರ್ತೆ/ಸಹಾಯಕಿ ಹುದ್ದೆಯನ್ನು ನಿಗದಿಪಡಿಸಿ ಪ್ರಕಟಣೆ ಹೊರಡಿಸಿ ಸದರಿ ಗ್ರಾಮ/ನಗರ ಪ್ರದೇಶದಲ್ಲಿ ಕಂದಾಯ ವಾರ್ಡ್‌ನಿಂದ ಅರ್ಜಿಗಳನ್ನು ಆಹ್ವಾನಿಸಿ ಆ ವರ್ಗದವರನ್ನೇ ಆಯ್ಕೆ ಮಾಡುವುದು.

VIII. **ಆಯ್ಕೆ ಆದ್ಯತೆ:-**

1. **ಆಸಿಡ್ ದಾಳಿಗೆ ತುತ್ತಾದ ಮಹಿಳೆಯರ ಆಯ್ಕೆ:-**

   ಆಸಿಡ್ ದಾಳಿಗೆ ತುತ್ತಾದ ಮಹಿಳೆಯರು ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರ ಹುದ್ದೆಗೆ ಅರ್ಜಿ ಸಲ್ಲಿಸಿದ್ದಲ್ಲಿ ಅರ್ಹ ಅಭ್ಯರ್ಥಿಗೆ +5 ಬೋನಸ್ ಅಂಕಗಳನ್ನು ನೀಡುವುದು.

2. **ಇಲಾಖೆಯ ಸಂಸ್ಥೆಗಳ ನಿವಾಸಿಗಳ ಆಯ್ಕೆ :-**

   ಇಲಾಖೆಯ ಸುಧಾರಣಾ ಸಂಸ್ಥೆ / ರಾಜ್ಯ ಮಹಿಳಾ ನಿಲಯಗಳ ನಿವಾಸಿಗಳು ಕನಿಷ್ಟ 3 ವರ್ಷ ಸಂಸ್ಥೆಯಲ್ಲಿರಬೇಕು ಹಾಗೂ ಈ ಬಗ್ಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿಗಳಿಂದ ಪಡೆದ ನಿವಾಸಿ ಪ್ರಮಾಣ ಪತ್ರ ನೇಮಕಾತಿ ಪ್ರಕ್ರಿಯೆಯಲ್ಲಿ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಗಳಿಸಿದ ಅಂಕಗಳಿಗೆ +10 ಬೋನಸ್ ಅಂಕಗಳನ್ನು ನೀಡುವುದು. ವಾಸಸ್ಥಳ ದೃಢೀಕರಣವನ್ನು ಸಲ್ಲಿಸಿರುವ ಆ ಜಿಲ್ಲೆಯಲ್ಲಿ ಎಲ್ಲಿಯಾದರೂ ಅರ್ಜಿ ಸಲ್ಲಿಸಬಹುದಾಗಿರುತ್ತದೆ.

3. **ವಿಧವೆಯರ ಆಯ್ಕೆ**:-

   ನೇಮಕಾತಿ ಪ್ರಕ್ರಿಯೆಯಲ್ಲಿ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಗಳಿಸಿದ ಅಂಕಗಳಿಗೆ +5 ಬೋನಸ್ ಅಂಕಗಳನ್ನು ನೀಡುವುದು. ಮರಣ ಪ್ರಮಾಣಪತ್ರ, ವಿಧವಾ ಪ್ರಮಾಣ ಪತ್ರಗಳನ್ನು ಕಡ್ಡಾಯವಾಗಿ ಲಗತ್ತಿಸುವುದು.

4. **ಅಂಗವಿಕಲರ ಆಯ್ಕೆ:-**

   - ದೈಹಿಕ ಅಂಗವಿಕಲತೆಯ ಪ್ರಮಾಣವನ್ನು ಶೇ.40ಕ್ಕಿಂತ ಹೆಚ್ಚಿರದ ಹಾಗೆ ನಿಗದಿಪಡಿಸುವುದು. ವಿದ್ಯಾರ್ಹತೆಯಲ್ಲಿ ಗಳಿಸಿದ ಅಂಕಗಳಿಗೆ +5 ಬೋನಸ್ ಅಂಕಗಳನ್ನು ನೀಡುವುದು. ಅಂಗವಿಕಲರು ಪ್ರಸ್ತುತ ತಾವು ಎಲ್ಲಿ ವಾಸವಾಗಿರುವುದಾಗಿ ವಾಸಸ್ಥಳ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೊ ಆ ಸ್ಥಳವನ್ನೇ ಅವರ ವಾಸಸ್ಥಳವೆಂದು ಪರಿಗಣಿಸತಕ್ಕದ್ದು.

   - ಅಂಗವಿಕಲ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಸಂದರ್ಭದಲ್ಲಿ ಅಂಗವಿಕಲತೆಯ ಪ್ರಮಾಣದ ಬಗ್ಗೆ ಸಂಶಯ ಉಂಟಾದಲ್ಲಿ ಆ ಅಭ್ಯರ್ಥಿಯನ್ನು ಆಯ್ಕೆ ಸಮಿತಿಯ ಮುಂದೆ ಖುದ್ದು ಹಾಜರಾಗಲು ಸೂಚಿಸಿ ಸದರಿ ಹುದ್ದೆ ನಿರ್ವಹಿಸಲು ಸಮರ್ಥರಿರುವ ಬಗ್ಗೆ ಸಮಿತಿಯೇ ಪರಿಶೀಲಿಸಿ ನಿರ್ಧರಿಸತಕ್ಕದ್ದು.

IX **ಬೋನಸ್ ಅಂಕಗಳು: (ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರಿಗೆ)**

ಅಂಗನವಾಡಿ ಕಾರ್ಯಕರ್ತೆ / ಸಹಾಯಕಿ ಹುದ್ದೆಗೆ ಅರ್ಜಿ ಸಲ್ಲಿಸಿದವರಲ್ಲಿ ಒಂದಕ್ಕಿಂತ ಹೆಚ್ಚು ಅಭ್ಯರ್ಥಿಗಳು ಸಮಾನ ಅಂಕ ಗಳಿಸಿದ್ದಲ್ಲಿ ವಯೋಹಿರಿತನವನ್ನು ಪರಿಗಣಿಸಬೇಕು. ವಯಸ್ಸು ಸಮಾನವಾಗಿದ್ದಲ್ಲಿ ವಿಧವೆ/ ವಿಚ್ಛೇದಿತೆಯರನ್ನು ಪರಿಗಣಿಸಬೇಕು. ಮಾಜಿ ದೇವದಾಸಿಯ ಮಗಳು, ಯೋಜನಾ ನಿರಾಶ್ರಿತರು, ವಿಚ್ಛೇದಿತ ಮಹಿಳೆಯರು ಇವರುಗಳಿಗೆ +5 ಬೋನಸ್ ಅಂಕಗಳನ್ನು ನಿಗದಿಪಡಿಸುವುದು. (ಅಧಿಕೃತ ಪ್ರಮಾಣಪತ್ರ ನೀಡುವ ಷರತ್ತಿಗೊಳಪಟ್ಟು)

X **ಆನ್ ಲೈನ್ ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲೆಗಳು:-**

1. ಅರ್ಜಿ ನಿಗದಿತ ನಮೂನೆಯಲ್ಲಿ (ಆನ್ ಲೈನ್)
2. ಜನನ ಪ್ರಮಾಣ ಪತ್ರ/ಜನ್ಮ ದಿನಾಂಕ ಇರುವ S.S.L.C.ಅಂಕಪಟ್ಟಿ
3. ನಿಗದಿತ ವಿದ್ಯಾರ್ಹತೆಯ ಅಂಕಪಟ್ಟಿ
4. ತಹಶೀಲ್ದಾರರು/ಉಪ ತಹಶೀಲ್ದಾರರಿಂದ ಪಡೆದ ಮೂರು (3) ವರ್ಷದೊಳಗಿನ ವಾಸಸ್ಥಳ ದೃಢೀಕರಣ ಪತ್ರ

5. ಅಭ್ಯರ್ಥಿಗಳ ಜಾತಿ ಪ್ರಮಾಣ ಪತ್ರ
6. ಪತಿಯ ಮರಣ ಪ್ರಮಾಣ ಪತ್ರ ಹಾಗೂ ವಿಧವಾ ಪ್ರಮಾಣ ಪತ್ರ (ವಿಧವಾ ವೇತನದ ದೃಢಿಕರಣವನ್ನು ಪರಿಗಣಿಸುವಂತಿಲ್ಲ)
7. ಅಂಗವಿಕಲತೆ ಪ್ರಮಾಣಪತ್ರ (ಅಂಗವಿಕಲ ವೇತನದ ದೃಢೀಕರಣವನ್ನು ಪರಿಗಣಿಸುವಂತಿಲ್ಲ)
8. ವಿಚ್ಛೇದನ ಪ್ರಮಾಣ ಪತ್ರ (ನ್ಯಾಯಾಲಯದಿಂದ ಪಡೆದಿರಬೇಕು)
9. ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವತಿಯಿಂದ ನಡೆಸಲ್ಪಟ್ಟ ಮಾಜಿ ದೇವದಾಸಿಯರ ಸಮೀಕ್ಷೆಯ ಪಟ್ಟಿಯಲ್ಲಿರುವ ಮಾಜಿ ದೇವದಾಸಿಯರ ಮಕ್ಕಳು ಎಂಬುದರ ಬಗ್ಗೆ ಮಹಿಳಾ ಅಭಿವೃದ್ಧಿ ನಿಗಮದ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ
10. ಇಲಾಖೆಯ ಸುಧಾರಣಾ ಸಂಸ್ಥೆ /ರಾಜ್ಯ ಮಹಿಳಾ ನಿಲಯಗಳ ನಿವಾಸಿಗಳು ಕನಿಷ್ಟ 3 ವರ್ಷ ಸಂಸ್ಥೆಯಲ್ಲಿರಬೇಕು. ಹಾಗೂ ಈ ಬಗ್ಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿಗಳಿಂದ ಪಡೆದ ನಿವಾಸಿ ಪ್ರಮಾಣ ಪತ್ರ
11. ಯೋಜನಾ ನಿರಾಶ್ರಿತರ ಬಗ್ಗೆ ತಹಶೀಲ್ದಾರರಿಂದ ಪಡೆದ ಪ್ರಮಾಣ ಪತ್ರ
12. ಆಧಾರ್ ಕಾರ್ಡ್/ಮತದಾರರ ಗುರುತಿನ ಚೀಟಿ/ರೇಷನ್ ಕಾರ್ಡ್/ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಂದ ಪಡೆದ ದೃಢೀಕರಣ ಪತ್ರ
13. ಎಲ್ಲಾ ದಾಖಲಾತಿಗಳನ್ನು ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಣ ಮಾಡಿಸಿ ಸಲ್ಲಿಸುವುದು.

## XI. **ಆಯ್ಕೆ ವಿಧಾನ:-**

1. ಅರ್ಜಿ ಸಲ್ಲಿಸಲು ಕನಿಷ್ಟ ಒಂದು ತಿಂಗಳು ನಿಗದಿಪಡಿಸಬೇಕು.
2. ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕದ ನಂತರ ಮುಂದಿನ 7 ಕೆಲಸದ ದಿನಗಳೊಳಗೆ ಸಮಿತಿ ಸಭೆ ಸೇರಬೇಕು.
3. ಆಯ್ಕೆ ಸಮಿತಿಯ ಎಲ್ಲಾ ಸದಸ್ಯರು ಹಾಜರಾಗಲು ಸಾಧ್ಯವಾಗದಂತಹ ಅನಿವಾರ್ಯ ಕಾರಣಗಳಿದ್ದಲ್ಲಿ ಕನಿಷ್ಟ 2/3ರಷ್ಟು ಸದಸ್ಯರು ಕಡ್ಡಾಯವಾಗಿ ಹಾಜರಿರಬೇಕು.
4. ಆನ್‌ಲೈನ್ ನಲ್ಲಿ ಸಲ್ಲಿಸಿದ ಎಲ್ಲಾ ಅರ್ಜಿಗಳನ್ನು ಅಂದೇ ಪರಿಶೀಲಿಸುವುದು
5. ಆನ್‌ಲೈನ್ ಅರ್ಜಿಯೊಂದಿಗೆ ಯಾವುದೇ ಅಗತ್ಯ ದಾಖಲೆಯನ್ನು ಸಲ್ಲಿಸದೇ ಇದ್ದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸುವುದು ಮತ್ತು ಅಸ್ಪಷ್ಟ / ಅಪೂರ್ಣ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.
6. ಸ್ವೀಕೃತವಾದ ಅರ್ಜಿಗಳನ್ನು ವಿದ್ಯಾರ್ಹತೆಯಲ್ಲಿ ಪಡೆದ ಅಂಕ ಮತ್ತು ಬೋನಸ್ ಅಂಕಗಳನ್ನು ಒಳಗೊಂಡಂತೆ ಪಡೆದ ಒಟ್ಟು ಅಂಕಗಳಿಗನುಸಾರವಾಗಿ ಕ್ರೋಢೀಕೃತ ಪಟ್ಟಿಯನ್ನು ಅನ್ ಲೈನ್ ನಲ್ಲಿ ಸಿದ್ದಪಡಿಸಿ ಅರ್ಹತೆ ಮತ್ತು ಮೆರಿಟ್‌ಗನುಸಾರವಾಗಿ ಪರಿಶೀಲಿಸಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಅಂದೇ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಸೂಚನಾ ಫಲಕದಲ್ಲಿ ಪ್ರಕಟಿಸುವುದು.
7. ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸಲು ಒಂದು ವಾರ (7 ದಿನಗಳು) ಕಾಲಾವಕಾಶ ನೀಡುವುದು. ಹಾಗೂ ಕಾಲಾವಕಾಶ ಮುಗಿದ ಮುಂದಿನ ಕೆಲಸದ ದಿನವೇ ಸಮಿತಿಯ ಸಭೆ ಕರೆದು ಆಕ್ಷೇಪಣೆಗಳು ಸ್ವೀಕೃತವಾದಲ್ಲಿ ಅವುಗಳನ್ನು ಕ್ರೋಢೀಕರಿಸಿ ಚರ್ಚಿಸಿ ಕಾರ್ಯಕರ್ತೆ/ ಸಹಾಯಕಿಯರ ಅಂತಿಮ ಆಯ್ಕೆ ಪಟ್ಟಿಯನ್ನು ಅಂದೇ ಸೂಚನಾ ಫಲಕದಲ್ಲಿ ಪ್ರಕಟಿಸುವುದು.
8. ಆಯ್ಕೆ ಪ್ರಕ್ರಿಯೆಯಲ್ಲಿ ಯಾವುದೇ ಸಮಸ್ಯೆ ಕಂಡು ಬಂದಲ್ಲಿ ನೇಮಕಾತಿ ಪ್ರಾಧಿಕಾರವೇ ಚರ್ಚಿಸಿ ನಿಯಮಾನುಸಾರ ಕ್ರಮ ವಹಿಸುವುದು. ಆಯ್ಕೆ ಸಮಿತಿಯ ನಿರ್ಧಾರವೇ ಅಂತಿಮವಾಗಿರುತ್ತದೆ.
9. ಆಯ್ಕೆ ನಡವಳಿ ಪುಸ್ತಕದಲ್ಲಿ ಆಯ್ಕೆ ಸಮಿತಿಗೆ ಹಾಜರಾದ ಎಲ್ಲಾ ಸದಸ್ಯರ ಹಾಜರಾತಿ ಪಡೆಯುವುದು. ಆಯ್ಕೆ ಪ್ರಕ್ರಿಯೆ ಮುಗಿದ ನಂತರ ನಡವಳಿಗಳನ್ನು ಸವಿವರವಾಗಿ (speaking order), ಕೇಂದ್ರುವಾರು ಆಯ್ಕೆಯಾದ ಅಭ್ಯರ್ಥಿಗಳ ಹೆಸರುಗಳನ್ನು ಯಾವ ಮಾನದಂಡಗಳನ್ವಯ ಆಯ್ಕೆ ಮಾಡಲಾಗಿದೆ? ಎಂಬ ಷರಾದೊಂದಿಗೆ ನಡವಳಿಯಲ್ಲಿ ದಾಖಲಿಸಿ ಯಾವುದೇ ತಿದ್ದುಪಡಿಗಳಿದ್ದಲ್ಲಿ

ಸಕಾರಣದೊಂದಿಗೆ ದೃಢೀಕರಿಸಿ ಹಾಜರಿರುವ ಆಯ್ಕೆ ಸಮಿತಿಯ ಎಲ್ಲಾ ಸದಸ್ಯರ ಸಹಿಯನ್ನು ಕಡ್ಡಾಯವಾಗಿ ಪಡೆಯತಕ್ಕದ್ದು.

10. ಸಂಬಂಧಪಟ್ಟ ಜಿಲ್ಲೆಯ ಉಪ ನಿರ್ದೇಶಕರು ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯಾಗಿ ಕಾರ್ಯ ನಿರ್ವಹಿಸಲು ನೇಮಕಾತಿ ಆದೇಶಗಳನ್ನು ಹೊರಡಿಸಬೇಕು.

11. ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯ ಹುದ್ದೆಯು ಸಂಪೂರ್ಣವಾಗಿ ಗೌರವ ಸೇವೆಯಾಗಿದ್ದು, ಖಾಯಂ ಹುದ್ದೆಯಲ್ಲವೆಂದು ನೇಮಕಾತಿ ಆದೇಶದಲ್ಲಿ ತಿಳಿಸಬೇಕು. ಆಯ್ಕೆಯಾದ ಅಭ್ಯರ್ಥಿಗಳು ವರದಿ ಮಾಡಿಕೊಳ್ಳುವ ಸಮಯದಲ್ಲಿ ಮೂಲ ದಾಖಲಾತಿಗಳು, ವೈದ್ಯಕೀಯ ಪ್ರಮಾಣ ಪತ್ರ (ಫಿಟ್‌ನೆಸ್ ಸರ್ಟಿಫಿಕೇಟ್) ಗಳನ್ನು ಹಾಜರುಪಡಿಸಿ ಸಂಬಂಧಪಟ್ಟ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಪರಿಶೀಲಿಸಿ ವರದಿ ಮಾಡಿಕೊಳ್ಳತಕ್ಕದ್ದು.

12. 6 ತಿಂಗಳು ಮುಂಚಿತವಾಗಿ ನಿವೃತ್ತಿಗೊಳ್ಳುವ ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರ ಪಟ್ಟಿ ಮಾಡಿ ಅವರ ಸ್ಥಾನಕ್ಕೆ ಆಯ್ಕೆ ಪ್ರಕ್ರಿಯೆಯನ್ನು ಪದೋನ್ನತಿ/ಸ್ಥಾನಪಲ್ಲಟ ನಂತರ ನೇಮಕಾತಿಯ ಮೂಲಕ ಹುದ್ದೆ ಭರ್ತಿ ಮಾಡಲು ತಯಾರಿ ಮಾಡಿಕೊಳ್ಳುವುದು. ಕೋರ್ಟ್ ಕೇಸ್ ಹೊರತು ಪಡಿಸಿ ಯಾವುದೇ ಕಾರಣಕ್ಕೂ ಗರಿಷ್ಠ 3 ತಿಂಗಳಿಗಿಂತ ಹೆಚ್ಚು ಅವಧಿಯ ವಿಳಂಬವನ್ನು ಮಾಡಬಾರದು.

13. ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಪ್ರಸ್ತಾವನೆಯನ್ನು ಉಪ ನಿರ್ದೇಶಕರಿಗೆ ಸಲ್ಲಿಸುವುದು. ಉಪ ನಿರ್ದೇಶಕರು ಏಕಕಡತದಲ್ಲಿ ಜಿಲ್ಲಾಧಿಕಾರಿಗಳಿಂದ ಅನುಮೋದನೆ ಪಡೆದು ಆಯ್ಕೆ ಆದೇಶ ನೀಡುವುದು.

**XII ಮಿನಿ ಅಂಗನವಾಡಿ ಕಾರ್ಯಕರ್ತೆ/ ಅಂಗನವಾಡಿ ಸಹಾಯಕಿಯರನ್ನು ಕಾರ್ಯಕರ್ತೆಯರನ್ನಾಗಿ ಪದೋನ್ನತಿಗೆ ಗುರುತಿಸುವ ವಿಧಾನದ ಕುರಿತು:-**

- ಅಂಗನವಾಡಿ ಕಾರ್ಯಕರ್ತೆ ಹುದ್ದೆಗಳಿಗೆ ಪಿ.ಯು.ಸಿ. ಉತ್ತೀರ್ಣ ಹೊಂದಿದ ಮಿನಿ ಅಂಗನವಾಡಿ ಕಾರ್ಯಕರ್ತೆಯರಿಗೆ ಮೊದಲ ಆದ್ಯತೆ ನೀಡುವುದು. ಅಂಗನವಾಡಿ ಸಹಾಯಕಿಯರು 5 ವರ್ಷ ಕನಿಷ್ಟ ಸೇವೆ , ಉತ್ತಮ ಸೇವಾ ದಾಖಲೆ, ಹಿರಿಯ ವಯೋಮಾನ ಹೊಂದಿದ ಸಹಾಯಕಿಯರನ್ನು ಹೆಚ್ಚಿನ ವಿದ್ಯಾರ್ಹತೆ ಹಾಗೂ ವಯಸ್ಸಿನ ಅನುಗುಣವಾಗಿ ಪದೋನ್ನತಿಗೆ ಪರಿಗಣಿಸುವುದು. ಹಾಗೂ ಅದೇ ಗ್ರಾಮ/ ನಗರ ಪ್ರದೇಶದಲ್ಲಿ ಮೂರು ಕಿ.ಮೀ. ವ್ಯಾಪ್ತಿಯಲ್ಲಿ ವಾಸವಾಗಿರುವುದು.

**XIII ಅನುಕಂಪದ ಆಧಾರದಲ್ಲಿ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಹುದ್ದೆಗೆ ಗುರುತಿಸುವ ಬಗ್ಗೆ.**

1. ಸೇವೆಯಲ್ಲಿರುವಾಗಲೇ ಮರಣ ಹೊಂದಿರುವ ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರ ಮಗಳು ಅಥವಾ ಸೊಸೆಯನ್ನು ಅರ್ಹತೆಯ ಮೇಲೆ ಅವರ ತಾಯಿ/ ಅತ್ತೆಯು ನಿರ್ವಹಿಸುತ್ತಿದ್ದ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯ ಹುದ್ದೆಗೆ ಅನುಕಂಪದ ಆಧಾರದಲ್ಲಿ ಆ ಕುಟುಂಬದ ಸದಸ್ಯರಿಂದ ನಿರಾಕ್ಷೇಪಣಾ ಪತ್ರವನ್ನು ನಿಗದಿತ ಮೊತ್ತದ ಛಾಪಾ ಕಾಗದದ ಮೇಲೆ ಪಡೆದು ನೇಮಕ ಮಾಡತಕ್ಕದ್ದು.

2. ಅಭ್ಯರ್ಥಿಯ ನಿಗದಿತ ವಿದ್ಯಾರ್ಹತೆ, ವಯೋಮಿತಿ ಮತ್ತು ಸ್ಥಳೀಯರಾಗಿರಬೇಕಾಗಿರುವುದು ಕಡ್ಡಾಯ ಹಾಗೂ ಉಳಿದ ಆಯ್ಕೆ ನಿಯಮಗಳು ಅನ್ವಯಿಸುತ್ತವೆ.

## XIV. ಶಿಸ್ತು ಪ್ರಾಧಿಕಾರ:-

ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಕಾರ್ಯನಿರ್ವಹಣೆಯಲ್ಲಿ ಯಾವುದೇ ನ್ಯೂನ್ಯತೆಗಳ ಬಗ್ಗೆ ದೂರುಗಳು ಜಿಲ್ಲಾ/ತಾಲ್ಲೂಕು ಮಟ್ಟದಲ್ಲಿ ಸ್ವೀಕೃತಗೊಂಡಲ್ಲಿ ಅವುಗಳನ್ನು ಪರಿಶೀಲಿಸಿ ಅವರ ಮೇಲೆ ಶಿಸ್ತುಕ್ರಮ ಕ್ರಮ ಕೈಗೊಳ್ಳಲು ಜಿಲ್ಲಾ ಆಯ್ಕೆ ಸಮಿತಿಗೆ ಅಧಿಕಾರವಿರುತ್ತದೆ. ಅದರಂತೆ, ರಾಜ್ಯಮಟ್ಟದ ಅಧಿಕಾರಿಗಳು ಅಂಗನವಾಡಿ ಕೇಂದ್ರಕ್ಕೆ ಭೇಟಿ ನೀಡಿದಾಗ ನ್ಯೂನ್ಯತೆಗಳು ಕಂಡುಬಂದಲ್ಲಿ ಅವರ ಮೇಲೆ ಶಿಸ್ತುಕ್ರಮ ಕೈಗೊಳ್ಳಲು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ಅಧಿಕಾರವಿರುತ್ತದೆ.

ಜಿಲ್ಲಾ ಮಟ್ಟದಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಆಯ್ಕೆ ಸಮಿತಿ ಹಾಗೂ ತಾಲ್ಲೂಕು ಮಟ್ಟದ ಸಮಿತಿಯನ್ನು ಈ ಕೆಳಕಂಡಂತೆ ರಚಿಸಲಾಗಿದೆ.

## XV. ಜಿಲ್ಲಾ/ತಾಲ್ಲೂಕು ಮಟ್ಟದ ಆಯ್ಕೆ ಸಮಿತಿ:-

### 1.ಜಿಲ್ಲಾ ಮಟ್ಟದ ಆಯ್ಕೆ ಸಮಿತಿ:-

**ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಆಯ್ಕೆ ಸಮಿತಿಯ ಸದಸ್ಯರು.**

| | | |
|---|---|---|
| 1 | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2 | ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ | ಉಪಾಧ್ಯಕ್ಷರು |
| 3 | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು | ಸದಸ್ಯರು |
| 4 | ಆಯುಕ್ತರು / ಉಪ ಆಯುಕ್ತರು ನಗರ ಸಭೆ/ ನಗರಪಾಲಿಕೆ / ಮಹಾನಗರ ಪಾಲಿಕೆ / ಬಿ.ಬಿ.ಎಂ.ಪಿ. | ಸದಸ್ಯರು |
| 5 | ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| 6 | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯ ಕಾರ್ಯದರ್ಶಿಗಳು |

### 2.ತಾಲ್ಲೂಕು ಮಟ್ಟದ ಪರಿಶೀಲನಾ ಸಮಿತಿ:-

**ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಅರ್ಜಿಗಳ ಪರಿಶೀಲನಾ ಸಮಿತಿ**

| | | |
|---|---|---|
| 1 | ತಹಶೀಲ್ದಾರರು | ಅಧ್ಯಕ್ಷರು |
| 2 | ಕಾರ್ಯ ನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್ | ಉಪಾಧ್ಯಕ್ಷರು |
| 3 | ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು | ಸದಸ್ಯರು |
| 4 | ಆಯುಕ್ತರು, ಪುರಸಭೆ/ಪಟ್ಟಣ ಪಂಚಾಯತಿ | ಸದಸ್ಯರು |
| 5 | ಕ್ಷೇತ್ರ ಶಿಕ್ಷಣಾಧಿಕಾರಿಗಳು | ಸದಸ್ಯರು |
| 6 | ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು | ಸದಸ್ಯ ಕಾರ್ಯದರ್ಶಿಗಳು |

ತಾಲ್ಲೂಕು ಸಮಿತಿಯ ಅರ್ಜಿಗಳನ್ನು ಪರಿಶೀಲಿಸಿದ ಪಟ್ಟಿಯನ್ನು ಉಪ ನಿರ್ದೇಶಕರಿಗೆ ಸಲ್ಲಿಸುವುದು. ಉಪ ನಿರ್ದೇಶಕರು ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ಅರ್ಜಿಗಳನ್ನು ಕ್ರೋಢೀಕರಿಸಿ ಜಿಲ್ಲಾ ಸಮಿತಿಗೆ ಸಲ್ಲಿಸಿ ನಡವಳಿ ಮಾಡುವುದು.

**ಇತರೆ ಷರತ್ತುಗಳು:-**

- ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು/ ಉಪ ನಿರ್ದೇಶಕರು ಅಭ್ಯರ್ಥಿಗಳು ಕನ್ನಡ ಭಾಷೆಯಲ್ಲಿ ಅರ್ಜಿಗಳನ್ನು ಡೌನ್ ಲೋಡ್ ಮಾಡಲು ಅವಕಾಶ ಕಲ್ಪಿಸುವುದು.
- ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರ ಹುದ್ದೆಗಳಿಗೆ ಅರ್ಜಿ ಸಲ್ಲಿಸುವಾಗ ಗ್ರಾಮ ಪಂಚಾಯತ್ ಮತ್ತು ವಾರ್ಡ್ ಮಾತ್ರ ಅಂತರ್ಜಾಲದಲ್ಲಿ ಪ್ರತಿಫಲನವಾಗುತ್ತಿದ್ದು ಗ್ರಾಮದ ಮಾಹಿತಿಯನ್ನು ಅಂತರ್ಜಾಲದ ತಂತ್ರಾಂಶದಲ್ಲಿ ಸೇರಿಸುವುದು ಹಾಗೂ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು/ಉಪ ನಿರ್ದೇಶಕರು ಗ್ರಾಮ/ವಾರ್ಡ್ ಮಾಹಿತಿಯನ್ನು ಅಂತರ್ಜಾಲದಲ್ಲಿ ಅಪ್ ಲೋಡ್ ಮಾಡುವುದು.
- ಸರ್ಕಾರದ ಆದೇಶ ದಿನಾಂಕ 18.08.2018ರಂತೆ ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರ ಸ್ಥಾನಪಲ್ಲಟ ಕೋರಿದಾಗ ಗೌರವ ಸೇವಾವಧಿಯಲ್ಲಿ 2 ಸ್ಥಾನಪಲ್ಲಟಕ್ಕೆ ಅವಕಾಶವಿದ್ದು, ಒಂದು ಬಾರಿ ಸ್ಥಾನಪಲ್ಲಟ ಮಾಡಿದ ನಂತರ 2ನೇ ಸ್ಥಾನಪಲ್ಲಟಕ್ಕೆ 3 ವರ್ಷಗಳ ಅಂತರವಿರಬೇಕು.

N. S. Khatavkar
08/12/2022

**(ನಿರ್ಮಲಾ ಎಸ್. ಖಟಾವ್‌ಕರ್)**
ಸರ್ಕಾರದ ಅಧೀನ ಕಾರ್ಯದರ್ಶಿ-1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗು ವಿಕಲಚೇನತರ
ಮತ್ತು ಹಿರಿಯ ನಾಗರೀಕರ ಸಬಲೀಕರಣ ಇಲಾಖೆ

8/12

**ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಪುಟ್ಟರಂಗಶೆಟ್ಟಿಸಿ. (ಚಾಮರಾಜನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 104 ಕ್ಕೆ ಒದಗಿಸಲಾದ ಅನುಬಂಧ-2**

**2020-21ನೇ ಸಾಲಿನಲ್ಲಿ ಜಿಲ್ಲಾ ಪಂಚಾಯತ್ ಯೋಜನೆಯ ಅಂಗನವಾಡಿ ಕಟ್ಟಡಗಳ ದುರಸ್ಥಿ/ಉನ್ನತೀಕರಣ ವಿವರ**

(ರೂ.ಲಕ್ಷಗಳಲ್ಲಿ)

| ಕ್ರ, ಸಂ | ವಿಧಾನ ಸಭಾ ಕ್ಷೇತ್ರದ ಹೆಸರು | ಕ್ರ, ಸಂಖ್ಯೆ | ಅಂಗನವಾಡಿ ಕೇಂದ್ರದ ಹೆಸರು | ಘಟಕ ವೆಚ್ಚ |
|---|---|---|---|---|
| 1 | ಚಾಮರಾಜನಗರ | 1 | ಗಾಳಿಪುರ-6 | 1.00 |
| | ಚಾಮರಾಜನಗರ | 2 | ಕರಿನಂಜನಪುರ-1 | 1.00 |
| | ಚಾಮರಾಜನಗರ | 3 | ಕರಿನಂಜನಪುರ-2 | 1.00 |
| | ಚಾಮರಾಜನಗರ | 4 | ಬೀಡಿಕಾಲೋನಿ-3 | 1.00 |
| | ಚಾಮರಾಜನಗರ | 5 | ರಾಮಸಮುದ್ರ-5 | 1.00 |
| | ಚಾಮರಾಜನಗರ | 6 | ರಾಮಸಮುದ್ರ-8 | 1.00 |
| | ಚಾಮರಾಜನಗರ | 7 | ಜಾಲಹಳ್ಳಿಹುಂಡಿ | 1.00 |
| | ಚಾಮರಾಜನಗರ | 8 | ಜಾಲಹಳ್ಳಿಹುಂಡಿ ಹೊಸಬಡಾವಣೆ | 1.00 |
| | ಚಾಮರಾಜನಗರ | 9 | ಚೆನ್ನಿಪುರದಮೋಳೆ-1 | 1.00 |
| | ಚಾಮರಾಜನಗರ | 10 | ಚೆನ್ನಿಪುರದಮೋಳೆ-2 | 1.00 |
| | ಚಾಮರಾಜನಗರ | 11 | ಮೇಗಲಉಪ್ಪಾರಬೀದಿ | 1.00 |
| | ಚಾಮರಾಜನಗರ | 12 | ನಾಯಕರಬೀದಿ-2 | 1.00 |
| | ಚಾಮರಾಜನಗರ | 13 | ನಾಯಕರಬೀದಿ-3 | 1.00 |
| | ಚಾಮರಾಜನಗರ | 14 | ಉಪ್ಪಾರಬೀದಿ-1 | 1.00 |
| | ಚಾಮರಾಜನಗರ | 15 | ಬದನಗುಪ್ಪೆ-1 | 1.00 |
| | ಚಾಮರಾಜನಗರ | 16 | ಬೆಂಡರವಾಡಿ-1 | 1.00 |
| | ಚಾಮರಾಜನಗರ | 17 | ಭುಜಗನಪುರ | 1.00 |
| | ಚಾಮರಾಜನಗರ | 18 | ತೆಂಕಲಮೋಳೆ | 1.00 |
| 2 | ಕೊಳ್ಳೇಗಾಲ | 19 | ಯಳಂದೂರು-2 | 1.00 |
| | ಕೊಳ್ಳೇಗಾಲ | 20 | ಯಳಂದೂರು-3 | 1.00 |
| 3 | ಹನೂರು | 21 | ಕೆ.ಎಸ್ ದೊಡ್ಡಿ | 1.00 |
| | ಹನೂರು | 22 | ಪೆದ್ದನಪಾಳ್ಯ | 1.00 |
| | ಹನೂರು | 23 | ಹುತ್ತೂರು-2 | 1.00 |
| | ಹನೂರು | 24 | ಹನೂರು-4 | 1.00 |
| | ಹನೂರು | 25 | ಕೆ.ಗುಂಡಾಪುರ-1 | 1.00 |
| | ಹನೂರು | 26 | ದೊಡ್ಡಲತ್ತೂರು | 1.00 |
| 4 | ಗುಂಡ್ಲುಪೇಟೆ | 27 | ಕೆರೆಹಳ್ಳಿ-2 | 1.00 |
| **ಒಟ್ಟು** | | | | **27.00** |

**2021-22ನೇ ಸಾಲಿನಲ್ಲಿ ಜಿಲ್ಲಾ ಪಂಚಾಯತ್ ಯೋಜನೆಯ ಅಂಗನವಾಡಿ ಕಟ್ಟಡಗಳ ದುರಸ್ಥಿ/ಉನ್ನತೀಕರಣ ವಿವರ**

(ರೂ.ಲಕ್ಷಗಳಲ್ಲಿ)

| ಕ್ರ, ಸಂ | ವಿಧಾನ ಸಭಾ ಕ್ಷೇತ್ರದ ಹೆಸರು | ಕ್ರ, ಸಂಖ್ಯೆ | ಅಂಗನವಾಡಿ ಕೇಂದ್ರದ ಹೆಸರು | ಘಟಕ ವೆಚ್ಚ |
|---|---|---|---|---|
| 1 | ಚಾಮರಾಜನಗರ | 1 | ಬೀಡಿಕಾಲೋನಿ-4 | 1.00 |
| | ಚಾಮರಾಜನಗರ | 2 | ಕರಿನಂಜನಪುರ-2 | 1.00 |
| | ಚಾಮರಾಜನಗರ | 3 | ಚನ್ನಿಪುರದಮೋಳೆ-1 | 1.00 |
| | ಚಾಮರಾಜನಗರ | 4 | ಜಾಲಹಳ್ಳಿ ಹುಂಡಿ | 1.00 |
| | ಚಾಮರಾಜನಗರ | 5 | ಜಾಲಹಳ್ಳಿ ಹುಂಡಿ ಹೊಸಬಡಾವಣೆ | 1.00 |
| | ಚಾಮರಾಜನಗರ | 6 | ಸಿದ್ದಯ್ಯನಪುರ | 1.00 |
| 2 | ಕೊಳ್ಳೇಗಾಲ | 7 | ಪಾಳ್ಯ-1 | 1.00 |
| | ಕೊಳ್ಳೇಗಾಲ | 8 | ಸತ್ತೇಗಾಲ-4 | 1.00 |
| | ಕೊಳ್ಳೇಗಾಲ | 9 | ಕಲ್ಲುಬಾವಿ ಕೇಂದ್ರ | 1.00 |
| | ಕೊಳ್ಳೇಗಾಲ | 10 | ಉಪ್ಪಲಗೇರಿ-2 | 1.00 |
| | ಕೊಳ್ಳೇಗಾಲ | 11 | ಬೆಂಡ್ರಳ್ಳಿ ಕೇಂದ್ರ | 1.00 |
| | ಕೊಳ್ಳೇಗಾಲ | 12 | ಯಳಂದೂರು-7 | 1.00 |
| | ಕೊಳ್ಳೇಗಾಲ | 13 | ಕಿನಕಳ್ಳಿ-2 | 1.00 |
| | ಕೊಳ್ಳೇಗಾಲ | 14 | ಬಿಳಿಗಿರಿರಂಗನಬೆಟ್ಟ | 1.00 |
| | ಕೊಳ್ಳೇಗಾಲ | 15 | ಪೌರಕಾರ್ಮಿಕ ಕೇಂದ್ರ | 1.00 |
| 3 | ಹನೂರು | 16 | ಗೇರಟ್ಟಿ ಕೇಂದ್ರ | 1.00 |
| | ಹನೂರು | 17 | ರಾಮೇಗೌಡನಹಳ್ಳಿ | 1.00 |
| | ಹನೂರು | 18 | ಮಂಗಲ-4 | 1.00 |
| | ಹನೂರು | 19 | ಹನೂರು-5 | 1.00 |
| 4 | ಗುಂಡ್ಲುಪೇಟೆ | 20 | ಶಿವಪುರ-4 | 1.00 |
| | ಗುಂಡ್ಲುಪೇಟೆ | 21 | ಅಣ್ಣೂರುಕೇರಿ-3 | 1.00 |
| | ಗುಂಡ್ಲುಪೇಟೆ | 22 | ಸಂಗೇಗೌಡನಹುಂಡಿ | 1.00 |
| | ಗುಂಡ್ಲುಪೇಟೆ | 23 | ಸಿದÀ್ದಯ್ಯನಪುರ ಕಾಲೋನಿ | 1.00 |
| | ಗುಂಡ್ಲುಪೇಟೆ | 24 | ಪಸಯ್ಯನಪುರ | 1.00 |
| | ಗುಂಡ್ಲುಪೇಟೆ | 25 | ಕುರುಬಗೇರಿ-2 | 1.00 |
| **ಒಟ್ಟು** | | | | **25.00** |

**ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಪುಟ್ಟರಂಗಶೆಟ್ಟಿಸಿ. (ಚಾಮರಾಜನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 104 ಕ್ಕೆ ಒದಗಿಸಲಾದ ಅನುಬಂಧ-2**

**2020-21ನೇ ಸಾಲಿನಲ್ಲಿ ತಾಲ್ಲೂಕು ಪಂಚಾಯತ್ ಯೋಜನೆಯ ಅಂಗನವಾಡಿ ಕಟ್ಟಡಗಳ ದುರಸ್ಥಿ/ಉನ್ನತೀಕರಣ ವಿವರ**

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ವಿಧಾನ ಸಭಾ ಕ್ಷೇತ್ರ | ಕ್ರ.ಸಂ | ಅಂ.ಕೇಂದ್ರದ ಹೆಸರು | ಖರ್ಚಾಗಿರುವ ಅನುದಾನ |
|---|---|---|---|---|
| 1 | ಚಾಮರಾಜನಗರ | 1 | ಅಮಚವಾಡಿ-2 | 2.14 |
| | ಚಾಮರಾಜನಗರ | 2 | ಅಮಚವಾಡಿ-10 | 2.14 |
| | ಚಾಮರಾಜನಗರ | 3 | ಚನ್ನಪ್ಪನಪುರ-1 | 2.14 |
| | ಚಾಮರಾಜನಗರ | 4 | ಉಡಿಗಾಲ-2 | 2.14 |
| | ಚಾಮರಾಜನಗರ | 5 | ಮಲ್ಲಯ್ಯನಪುರ-1 | 2.14 |
| | ಚಾಮರಾಜನಗರ | 6 | ಮಲ್ಲಯ್ಯನಪುರ-2 | 2.14 |
| | ಚಾಮರಾಜನಗರ | 7 | ಬ್ಯಾಡಮೂಡ್ಲು-1 | 2.14 |
| | ಚಾಮರಾಜನಗರ | 8 | ಗೌತಮ್‌ಕಾಲೋನಿ | 2.14 |
| | ಚಾಮರಾಜನಗರ | 9 | ಮುನೇಶ್ವರಕಾಲೋನಿ | 2.14 |
| | ಚಾಮರಾಜನಗರ | 10 | ಬೆಂಡರವಾಡಿ-2 | 1.00 |
| | ಚಾಮರಾಜನಗರ | 11 | ಚಂದಕವಾಡಿ-3 | 1.00 |
| | ಚಾಮರಾಜನಗರ | 12 | ಮಾದಪುರ-2 | 1.00 |
| | ಚಾಮರಾಜನಗರ | 13 | ಕಲ್ಲಹಳ್ಳಿ | 1.00 |
| | ಚಾಮರಾಜನಗರ | 14 | ಸರಗೂರು-2 | 1.00 |
| | ಚಾಮರಾಜನಗರ | 15 | ಕಾಡಹಳ್ಳಿ-2 | 0.50 |
| | ಚಾಮರಾಜನಗರ | 16 | ಕೋಟಂಬಳ್ಳಿ-1 | 1.00 |
| | ಚಾಮರಾಜನಗರ | 17 | ದೇಶವಳ್ಳಿ | 1.00 |
| | ಚಾಮರಾಜನಗರ | 18 | ಸುತ್ತೂರು-3 | 0.50 |
| | ಚಾಮರಾಜನಗರ | 19 | ಇರಸವಾಡಿ-2 | 0.50 |
| | ಚಾಮರಾಜನಗರ | 20 | ಗೂಳಿಪುರ-3 | 0.50 |
| | ಚಾಮರಾಜನಗರ | 21 | ಕಾವುದವಾಡಿ-2 | 2.20 |
| | ಚಾಮರಾಜನಗರ | 22 | ಹೊಂಗನೂರು-7 | 1.00 |
| 2 | ಕೊಳ್ಳೇಗಾಲ | 23 | ಕುಣಗಳ್ಳಿ-1 | 0.50 |
| | ಕೊಳ್ಳೇಗಾಲ | 24 | ಚಿಲಕವಾಡಿ-2 | 0.50 |
| | ಕೊಳ್ಳೇಗಾಲ | 25 | ಕುಣಗಳ್ಳಿ-3 | 0.50 |
| | ಕೊಳ್ಳೇಗಾಲ | 26 | ಕುಂತೂರು-2 | 0.50 |
| | ಕೊಳ್ಳೇಗಾಲ | 27 | ಹಳೇ ಹಂಪಾಪುರ | 0.50 |
| | ಕೊಳ್ಳೇಗಾಲ | 28 | ಟಗರಪುರ | 0.50 |
| | ಕೊಳ್ಳೇಗಾಲ | 29 | ಹೊಸಮಾಲಂಗಿ | 0.50 |
| | ಕೊಳ್ಳೇಗಾಲ | 30 | ಹೊನ್ನೂರು-3 | 3.00 |
| | ಕೊಳ್ಳೇಗಾಲ | 31 | ಗೌಡಳ್ಳಿ-1 | 3.00 |
| | ಕೊಳ್ಳೇಗಾಲ | 32 | ಕೆಸ್ತೂರು-3 | 2.00 |
| | ಕೊಳ್ಳೇಗಾಲ | 33 | ಕೆಸÀ್ತೂರು-5 | 2.00 |
| | | | | |

| ಕ್ರ. ಸಂ | ವಿಧಾನ ಸಭಾ ಕ್ಷೇತ್ರ | ಕ್ರ.ಸಂ | ಅಂ.ಕೇಂದ್ರದ ಹೆಸರು | ಖರ್ಚಾಗಿರುವ ಅನುದಾನ |
|---|---|---|---|---|
| 3 | ಹನೂರು | 34 | ನರೀಪುರ-2 | 0.50 |
| | ಹನೂರು | 35 | ಸತ್ತೇಗಾಲ-4 | 0.50 |
| | ಹನೂರು | 36 | ಸತ್ತೇಗಾಲ-6 | 0.50 |
| | ಹನೂರು | 37 | ಪ್ರಕಾಶ್ ಪಾಳ್ಯ | 0.50 |
| | ಹನೂರು | 38 | ರಾಚಪ್ಪಾಜಿನಗರ | 0.50 |
| | ಹನೂರು | 39 | ಬಿ.ಗುಂಡಪುರ | 0.50 |
| | ಹನೂರು | 40 | ಮಂಗಲ-4 | 0.50 |
| | ಹನೂರು | 41 | ಉಗನಿಯ-1 | 0.50 |
| | ಹನೂರು | 42 | ವಿ.ಎಸ್.ದೊಡ್ಡಿ | 0.50 |
| | ಹನೂರು | 43 | ಗಾಂಧಿನಗರ | 0.50 |
| | ಹನೂರು | 44 | ಚಿಕ್ಕಮಾಲಾಪುರ-1 | 0.50 |
| | ಹನೂರು | 45 | ನÁಗನತ್ತ | 0.50 |
| | ಹನೂರು | 46 | ಮಂಚಾಪುರ-1 | 0.50 |
| | ಹನೂರು | 47 | ಮಂಗಲ-3 | 0.50 |
| | ಹನೂರು | 48 | ಕಳ್ಳಿದೊಡ್ಡಿ | 0.50 |
| | ಹನೂರು | 49 | ಮೀಣ್ಯಂ | 0.50 |
| | ಹನೂರು | 50 | ಹುತ್ತೂರು | 0.50 |
| | ಹನೂರು | 51 | ಗೋಪಿನಾಥಂ ಪುದೂರು | 0.50 |
| | ಹನೂರು | 52 | ರಾಮಾಪುರ | 0.50 |
| | ಹನೂರು | 53 | ಮಮ ಬೆಟ್ಟ-1 | 0.50 |
| | ಹನೂರು | 54 | ಬಂಡಳ್ಳಿ-2 | 0.50 |
| | ಹನೂರು | 55 | ದೊಮ್ಮನಗದ್ದೆ | 0.50 |
| | ಹನೂರು | 56 | ಕುರುಬರದೊಡ್ಡಿ-1 | 0.50 |
| | ಹನೂರು | 57 | ಕುರುಬರದೊಡ್ಡಿ-2 | 0.50 |
| | ಹನೂರು | 58 | ಉಯಿಲ್‌ನತ್ತ | 0.50 |
| | ಹನೂರು | 59 | ಬಂಡಳ್ಳಿ-1 | 0.50 |
| 4 | ಗುಂಡ್ಲುಪೇಟೆ | 60 | ಚನ್ನಂಜಯ್ಯನಹುಂಡಿ | 0.50 |
| | ಗುಂಡ್ಲುಪೇಟೆ | 61 | ಮಡಹಳ್ಳಿ | 0.50 |
| | ಗುಂಡ್ಲುಪೇಟೆ | 62 | ಇಂಗಲವಾಡಿ | 0.50 |
| | ಗುಂಡ್ಲುಪೇಟೆ | 63 | ಬನ್ನಿತಾಳಪುರ-1 | 0.50 |
| | ಗುಂಡ್ಲುಪೇಟೆ | 64 | ರಂಗನಾಥಪುರ | 0.50 |
| | ಗುಂಡ್ಲುಪೇಟೆ | 65 | ತೊರವಳ್ಳಿ | 0.50 |
| | ಗುಂಡ್ಲುಪೇಟೆ | 66 | ಕಗÀಗಳ | 0.50 |
| | ಗುಂಡ್ಲುಪೇಟೆ | 67 | ತ್ರಿಯಂಬಕಾಪುರ | 0.50 |
| | ಗುಂಡ್ಲುಪೇಟೆ | 68 | ಬರಗಿ | 0.50 |
| | ಗುಂಡ್ಲುಪೇಟೆ | 69 | ಬರಗಿ ಕಾಲೋನಿ | 0.50 |
| | ಗುಂಡ್ಲುಪೇಟೆ | 70 | ಕೊಡಸೋಗೆ-1 | 0.50 |
| | ಗುಂಡ್ಲುಪೇಟೆ | 71 | ಸೋಮನಪುರ | 0.50 |
| | ಗುಂಡ್ಲುಪೇಟೆ | 72 | ಕುಂದಕೆರೆ | 0.50 |
| | ಗುಂಡ್ಲುಪೇಟೆ | 73 | ಬಾಚಹಳ್ಳಿ | 0.50 |
| :3: | | | | |

| ಕ್ರ. ಸಂ | ವಿಧಾನ ಸಭಾ ಕ್ಷೇತ್ರ | ಕ್ರ.ಸಂ | ಅಂ.ಕೇಂದ್ರದ ಹೆಸರು | ಖರ್ಚಾಗಿರುವ ಅನುದಾನ |
|---|---|---|---|---|
| 4 | ಗುಂಡ್ಲುಪೇಟೆ | 74 | ಹಂಗಳ-1 | 0.50 |
| | ಗುಂಡ್ಲುಪೇಟೆ | 75 | ಹಂಗಳ-2 | 0.50 |
| | ಗುಂಡ್ಲುಪೇಟೆ | 76 | ದೊಡ್ಡತುಪ್ಪೂರು | 0.50 |
| | ಗುಂಡ್ಲುಪೇಟೆ | 77 | ಬೆಟ್ಟಹಳ್ಳಿ | 0.50 |
| | ಗುಂಡ್ಲುಪೇಟೆ | 78 | ಕಾಳನಹುಂಡಿ | 0.50 |
| | ಗುಂಡ್ಲುಪೇಟೆ | 79 | ಬೆಳಚಲವಾಡಿ | 0.50 |
| | ಗುಂಡ್ಲುಪೇಟೆ | 80 | ಮದ್ದೂರು | 0.50 |
| | ಗುಂಡ್ಲುಪೇಟೆ | 81 | ಭೀಮನಬೀಡು-1 | 0.50 |
| | ಗುಂಡ್ಲುಪೇಟೆ | 82 | ರಾಘವಾಪುರ | 0.50 |
| | ಗುಂಡ್ಲುಪೇಟೆ | 83 | ಭೋಗಯ್ಯನಹುಂಡಿ | 0.50 |
| | ಗುಂಡ್ಲುಪೇಟೆ | 84 | ದೇವರಹಳ್ಳಿ | 0.50 |
| | ಗುಂಡ್ಲುಪೇಟೆ | 85 | ಹಂಗಳದ ಹೊಸಹಳ್ಳಿ | 0.50 |
| | ಗುಂಡ್ಲುಪೇಟೆ | 86 | ಮೊಳಹಳ್ಳಿ ಕಾಲೋನಿ | 0.50 |
| | ಗುಂಡ್ಲುಪೇಟೆ | 87 | ಮಲ್ಲಯ್ಯನಪುರ | 0.50 |
| | ಗುಂಡ್ಲುಪೇಟೆ | 88 | ಸೋಮಹಳ್ಳಿ | 0.50 |
| | ಗುಂಡ್ಲುಪೇಟೆ | 89 | ಕೊಡಗಾಪುರ | 0.50 |
| | ಗುಂಡ್ಲುಪೇಟೆ | 90 | ಕಬ್ಬಹಳ್ಳಿ-1 | 0.50 |
| | ಗುಂಡ್ಲುಪೇಟೆ | 91 | ಕಬ್ಬಹಳ್ಳಿ-4 | 0.50 |
| | ಗುಂಡ್ಲುಪೇಟೆ | 92 | ತೆರಕಣಾಂಬಿ-2 | 0.50 |
| | ಗುಂಡ್ಲುಪೇಟೆ | 93 | ತೆರಕಣಾಂಬಿ | 0.50 |
| | ಗುಂಡ್ಲುಪೇಟೆ | 94 | ಶಿವಪುರ-2 | 0.50 |
| | ಗುಂಡ್ಲುಪೇಟೆ | 95 | ಹುಲ್ಲೇಪುರ | 0.50 |
| | ಗುಂಡ್ಲುಪೇಟೆ | 96 | ಕಾರೇಮಾಳ | 0.50 |
| | ಗುಂಡ್ಲುಪೇಟೆ | 97 | ಹಂಗಳಪುರ | 0.50 |
| | ಗುಂಡ್ಲುಪೇಟೆ | 98 | ಕೂತನೂರು | 0.50 |
| | ಗುಂಡ್ಲುಪೇಟೆ | 99 | ನಾಗಪಟ್ಟಣ | 0.50 |
| **ಒಟ್ಟು** | | | | **77.96** |
| | | | | |

**2021-22ನೇ ಸಾಲಿನಲ್ಲಿ ತಾಲ್ಲೂಕು ಪಂಚಾಯತ್ ಯೋಜನೆಯ ಅಂಗನವಾಡಿ ಕಟ್ಟಡಗಳ ದುರಸ್ತಿ/ಉನ್ನತೀಕರಣ ವಿವರ**

**(ರೂ.ಲಕ್ಷಗಳಲ್ಲಿ)**

| ಕ್ರ. ಸಂ | ವಿಧಾನ ಸಭಾ ಕ್ಷೇತ್ರ | ಕ್ರ.ಸಂ | ಅಂ.ಕೇಂದ್ರದ ಹೆಸರು | ಖರ್ಚಾಗಿರುವ ಅನುದಾನ |
|---|---|---|---|---|
| | ಚಾಮರಾಜನಗರ | 1 | ಅಮಚವಾಡಿ-4 | 0.70 |
| | ಚಾಮರಾಜನಗರ | 2 | ಅಮಚವಾಡಿ-6 | 0.70 |
| | ಚಾಮರಾಜನಗರ | 3 | ಚನ್ನಪ್ಪನಪುರ-3 | 0.70 |
| | ಚಾಮರಾಜನಗರ | 4 | ಅಟ್ಟುಗೂಳಿಪುರ-1 | 0.70 |
| | ಚಾಮರಾಜನಗರ | 5 | ಮಲ್ಲಯ್ಯನಪುರ-1 | 0.92 |
| | ಚಾಮರಾಜನಗರ | 6 | ಮಲ್ಲಯ್ಯನಪುರ-2 | 0.92 |
| | ಚಾಮರಾಜನಗರ | 7 | ಕೆ ಕೆ ಹುಂಡಿ-2 | 0.92 |
| | ಚಾಮರಾಜನಗರ | 8 | ತಮ್ಮಡಹಳ್ಳಿ-4 | 0.92 |

| ಕ್ರ. ಸಂ | ವಿಧಾನ ಸಭಾ ಕ್ಷೇತ್ರ | ಕ್ರ.ಸಂ | ಅಂ.ಕೇಂದ್ರದ ಹೆಸರು | ಖರ್ಚಾಗಿರುವ ಅನುದಾನ |
|---|---|---|---|---|
| 1 | ಚಾಮರಾಜನಗರ | 9 | ಸಿದ್ದಯ್ಯನಪುರ-3 | 0.92 |
| | ಚಾಮರಾಜನಗರ | 10 | ಜಾಲಹಳ್ಳಿಹುಂಡಿ | 0.70 |
| | ಚಾಮರಾಜನಗರ | 11 | ಚEನ್ನಿಪುರದಮೋಳೆ-1 | 0.92 |
| | ಚಾಮರಾಜನಗರ | 12 | ಅರಕಲವಾಡಿ-1 | 0.70 |
| | ಚಾಮರಾಜನಗರ | 13 | ಯಾನಗಹಳ್ಳಿ-1 | 0.70 |
| | ಚಾಮರಾಜನಗರ | 14 | ಯರಗನಹಳ್ಳಿ-1 | 0.92 |
| | ಚಾಮರಾಜನಗರ | 15 | ಮಾದಲವಾಡಿ-1 | 0.70 |
| | ಚಾಮರಾಜನಗರ | 16 | ಬಿಸಲವಾಡಿ-1 | 0.70 |
| | ಚಾಮರಾಜನಗರ | 17 | ಬಿ.ಜಿ ಕಾಲೋನಿ | 0.70 |
| | ಚಾಮರಾಜನಗರ | 18 | ಬಸವಪುರ-3 | 0.70 |
| | ಚಾಮರಾಜನಗರ | 19 | ಬಸವÁಪುರ-3 | 0.70 |
| | ಚಾಮರಾಜನಗರ | 20 | ಚಂದುಕಟ್ಟೆಮೋಳೆ | 0.79 |
| | ಚಾಮರಾಜನಗರ | 21 | ಬೆಜ್ಜಳಪಾಳ್ಯ | 0.70 |
| | ಚಾಮರಾಜನಗರ | 26 | ಕೆರೆಹಳ್ಳಿ-2 | 1.00 |
| | ಚಾಮರಾಜನಗರ | 27 | ಮಂಗಲ-5 | 1.00 |
| | ಚಾಮರಾಜನಗರ | 28 | ಲಿಂಗರಾಜಿಪುರ | 1.00 |
| | ಚಾಮರಾಜನಗರ | 29 | ಸರಗೂರು-1 | 1.00 |
| | ಚಾಮರಾಜನಗರ | 30 | ಹೊಮ್ಮ-1 | 1.00 |
| | ಚಾಮರಾಜನಗರ | 31 | ಹೆಬ್ಬಸೂರು | 1.00 |
| | ಚಾಮರಾಜನಗರ | 32 | ಸುತ್ತೂರು | 1.00 |
| | ಚಾಮರಾಜನಗರ | 33 | ಗಂಗವಾಡಿ | 1.00 |
| | ಚಾಮರಾಜನಗರ | 34 | ಬಸಪ್ಪನಪಾಳ್ಯ-1 | 1.00 |
| | ಚಾಮರಾಜನಗರ | 35 | ಬೂದಂಬಳ್ಳಿ | 1.00 |
| | ಚಾಮರಾಜನಗರ | 36 | ಹೆಗ್ಗವಾಡಿಪುರ-2 | 1.00 |
| | ಚಾಮರಾಜನಗರ | 37 | ನಾವಳ್ಳಿ-8 | 1.00 |
| | ಚಾಮರಾಜನಗರ | 38 | ಬೂದಿತಿಟ್ಟು | 1.00 |
| | ಚಾಮರಾಜನಗರ | 40 | ಹಂಡರಕಹಳ್ಳಿ | 1.00 |
| | | ಒಟ್ಟು | | **30.33** |
| 2 | ಕೊಳ್ಳೇಗಾಲ | 1 | ಕುಂತೂರುಮೋಳೆ | 0.49 |
| | ಕೊಳ್ಳೇಗಾಲ | 2 | ಬಾಳಗುಣಸೆ | 0.49 |
| | ಕೊಳ್ಳೇಗಾಲ | 3 | ಕೊಂಗರಹಳ್ಳಿ | 0.50 |
| | ಕೊಳ್ಳೇಗಾಲ | 4 | ದೊಡ್ಡಿಂದುವಾಡಿ | 0.50 |
| | ಕೊಳ್ಳೇಗಾಲ | 5 | ಕರಿಯನಪುರ | 0.50 |
| | ಕೊಳ್ಳೇಗಾಲ | 6 | ಸಿಂಗಾನಲ್ಲೂರು | 0.50 |
| | ಕೊಳ್ಳೇಗಾಲ | 7 | ಗೊಬ್ಬಳೀಪುರ | 0.40 |
| | ಕೊಳ್ಳೇಗಾಲ | 8 | ಟಗರಪುರಮೋಳೆ | 0.49 |
| | ಕೊಳ್ಳೇಗಾಲ | 9 | ತೇರಂಬಳ್ಳಿ | 0.50 |
| | ಕೊಳ್ಳೇಗಾಲ | 10 | ಕಿನಕನಹಳ್ಳಿ-2 | 2.50 |
| | ಕೊಳ್ಳೇಗಾಲ | 11 | ಪುರಾಣಿ ಪೋಡು | 1.00 |
| | ಕೊಳ್ಳೇಗಾಲ | 12 | ದುಗ್ಗಹಟ್ಟಿ-2 | 1.00 |
| | ಕೊಳ್ಳೇಗಾಲ | 13 | ಗೌಡಹಳ್ಳಿ-2 | 1.00 |
| | ಕೊಳ್ಳೇಗಾಲ | 14 | ಹೆಗ್ಗಡಹುಂಡಿ | 1.00 |

| ಕ್ರ. ಸಂ | ವಿಧಾನ ಸಭಾ ಕ್ಷೇತ್ರ | ಕ್ರ.ಸಂ | ಅಂ.ಕೇಂದ್ರದ ಹೆಸರು | ಖರ್ಚಾಗಿರುವ ಅನುದಾನ |
|---|---|---|---|---|
| | ಕೊಳ್ಳೇಗಾಲ | 15 | ಬಂಗ್ಲೇಪೋಡು | 1.00 |
| | ಕೊಳ್ಳೇಗಾಲ | 16 | ಮಂಜಿಗುಂಡಿಕಲ್ಯಾಣಿ ಪೋಡು | 1.00 |
| | ಕೊಳ್ಳೇಗಾಲ | 17 | ಯರಕನಗದ್ದೆ | 1.00 |
| | ಕೊಳ್ಳೇಗಾಲ | 18 | ಕಿನಕನಹಳ್ಳಿ-1 | 1.00 |
| | ಕೊಳ್ಳೇಗಾಲ | 19 | ಬಿಳಿಗಿರಿಗಂರನಬೆಟ್ಟ | 1.00 |
| | **ಕೊಳ್ಳೇಗಾಲ** | | **ಒಟ್ಟು** | **15.87** |
| 3 | ಹನೂರು | 1 | ಉದ್ದನೂರು | 0.50 |
| | ಹನೂರು | 2 | ಚೆನ್ನಾಲಿಂಗನಹಳ್ಳಿ | 0.50 |
| | ಹನೂರು | 3 | ಗಂಗನದೊಡ್ಡಿ | 0.39 |
| | ಹನೂರು | 4 | ಹೊಸಳ್ಳಿ | 0.50 |
| | ಹನೂರು | 5 | ಚಿಕ್ಕಾಲತ್ತೂರು | 0.50 |
| | **ಹನೂರು** | | **ಒಟ್ಟು** | **2.39** |
| 4 | ಗುಂಡ್ಲುಪೇಟೆ | 1 | ಆಲತ್ತೂರು-2 | 1.00 |
| | ಗುಂಡ್ಲುಪೇಟೆ | 2 | ಸಂಗೇಗೌಡನಹುಂಡಿ | 1.00 |
| | ಗುಂಡ್ಲುಪೇಟೆ | 3 | ಕುರಬಗೇರಿ-2 | 1.00 |
| | ಗುಂಡ್ಲುಪೇಟೆ | 4 | ಹಣ್ಣೂರು ಕೇರಿ-3 | 1.00 |
| | ಗುಂಡ್ಲುಪೇಟೆ | 5 | ಶಿವಪುರ-4 | 1.00 |
| | ಗುಂಡ್ಲುಪೇಟೆ | 6 | ಅಕಲಾಪುರ | 1.00 |
| | ಗುಂಡ್ಲುಪೇಟೆ | 7 | ಸಿದ್ದಯ್ಯನಪುರ ಕಾಲೋನಿ | 0.40 |
| | ಗುಂಡ್ಲುಪೇಟೆ | 8 | ಕಗ್ಗಳ-2 | 0.40 |
| | ಗುಂಡ್ಲುಪೇಟೆ | 9 | ಬಾಚಹಳ್ಳಿ-3 | 0.40 |
| | ಗುಂಡ್ಲುಪೇಟೆ | 10 | ಮiÁಡರಹಳ್ಳಿ-3 | 2.00 |
| | ಗುಂಡ್ಲುಪೇಟೆ | 11 | ದÉೀಪಾಪುರ | 2.00 |
| | ಗುಂಡ್ಲುಪೇಟೆ | 12 | ತೆರಕಣಾಂಬಿ-2 | 2.00 |
| | ಗುಂಡ್ಲುಪೇಟೆ | 13 | ಶಿವಪುರ-1 | 2.00 |
| | ಗುಂಡ್ಲುಪೇಟೆ | 14 | ಹೊನ್ನಶೆಟ್ಟರಹುಂಡಿ | 1.20 |
| | ಗುಂಡ್ಲುಪೇಟೆ | 15 | ಬೆಟ್ಟದಪುರ-1 | 0.70 |
| | ಗುಂಡ್ಲುಪೇಟೆ | 16 | ಕೆಬ್ಬೆಪುರ | 0.70 |
| | ಗುಂಡ್ಲುಪೇಟೆ | 17 | ಕುಲಗಾಣ-3 | 0.70 |
| | ಗುಂಡ್ಲುಪೇಟೆ | 18 | ಮೂಡ್ನಕೂಡು-3 | 0.70 |
| | | **ಒಟ್ಟು** | | **19.20** |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 341 |
| ಸದಸ್ಯರ ಹೆಸರು | : | ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ) |
| ಉತ್ತರಿಸಬೇಕಾದ ದಿನಾಂಕ | : | 24.02.2023 |
| ಉತ್ತರಿಸಬೇಕಾದ ಸಚಿವರು | : | ನಗರಾಭಿವೃದ್ಧಿ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕಂಪ್ಯೂಟರ್ ಆಪರೇಟರ್/ಡಾಟಾ ಎಂಟ್ರಿ ಆಪರೇಟರ್‌ಗಳನ್ನು ಖಾಯಂ ಗೊಳಿಸಲು ಸರ್ಕಾರದ ಹಂತದಲ್ಲಿ ಕಡತ ಪರಿಶೀಲನೆಯಲ್ಲಿದೆಯೇ; ಹಾಗಿದ್ದಲ್ಲಿ, ಯಾವಾಗ ಖಾಯಂ ಗೊಳಿಸಲಾಗುವುದು; (ಮಾಹಿತಿ ನೀಡುವುದು) | ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕಂಪ್ಯೂಟರ್ ಆಪರೇಟರ್ / ಡಾಟಾಎಂಟ್ರಿ ಆಪರೇಟರ್‌ಗಳನ್ನು ಖಾಯಂಗೊಳಿಸುವ ಯಾವುದೇ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿರುವುದಿಲ್ಲ. |
| ಆ) | ಖಾಯಂಗೊಳಿಸಲು ಇರುವ ಮಾನದಂಡಗಳೇನು; (ವಿವರ ನೀಡುವುದು) | |

ನಅಇ 13 ಹೆಚ್‌ಡಿಎಂಸಿ 2023(ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 342
ಸದಸ್ಯರ ಹೆಸರು : ಶ್ರೀ ಅಬ್ಬಯ್ಯ ಪ್ರಸಾದ್
(ಹುಬ್ಬಳ್ಳಿ-ಧಾರವಾಡ ಪೂರ್ವ)
ಉತ್ತರಿಸಬೇಕಾದ ದಿನಾಂಕ : 24.02.2023
ಉತ್ತರಿಸಬೇಕಾದ ಸಚಿವರು : ನಗರಾಭಿವೃದ್ಧಿ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯನ್ನು ಕರ್ತವ್ಯ ನಿರ್ವಹಿಸುತ್ತಿರುವ ಆಟೋ ಟಿಪ್ಪರ್ ಚಾಲಕರಿಗೆ ಸರಿಯಾಗಿ ವೇತನ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಕುರಿತು ಯಾವ ಕ್ರಮ ಕೈಗೊಳ್ಳಲಾಗಿದೆ;( ವಿವರ ನೀಡುವುದು) | ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಯಲ್ಲಿ ತ್ಯಾಜ್ಯ ಸಂಗ್ರಹಣಾ ವಾಹನಗಳಿಗೆ 239 ಚಾಲಕರನ್ನು (216 ಆಟೋ ಟಿಪ್ಪರ್ ಹಾಗೂ ವಿವಿಧ ವಾಹನಗಳ ಚಾಲಕರು ಸೇರಿ ಒಟ್ಟು 239) ಕೆ.ಟಿ.ಪಿ.ಪಿ. ನಿಯಮಾವಳಿಗಳನ್ವಯ ಹೊರಗುತ್ತಿಗೆ ಆಧಾರದ ಮೇಲೆ ಪಡೆದುಕೊಳ್ಳಲಾಗಿದೆ. ಸದರಿ ಟೆಂಡರ್ನ ಕಾರ್ಯಾದೇಶದ ಷರತ್ತಿನಂತೆ ವಾಹನ ಚಾಲಕರು ಪ್ರತಿನಿತ್ಯ ಆಟೋ ಟಿಪ್ಪರ್‌ಗಳ ಮುಖಾಂತರ ಮನೆ-ಮನೆಗಳಿಂದ ತ್ಯಾಜ್ಯ ಸಂಗ್ರಹಣೆಯಲ್ಲಿ ಯಾವುದೇ ವ್ಯತ್ಯಯವಾಗದಂತೆ ಕಾರ್ಯನಿರ್ವಹಿಸಬೇಕಾಗಿರುತ್ತದೆ. ಸದರಿ ಚಾಲಕರಿಗೆ ಪ್ರತಿ ಮಾಹೆಯಲ್ಲಿ ಕಾರ್ಯನಿರ್ವಹಿಸಿದ ಬಗ್ಗೆ ಸಂಬಂಧಿಸಿದ ಆರೋಗ್ಯ ನಿರೀಕ್ಷಕರು, ಪರಿಸರ ಅಭಿಯಂತರರು ಹಾಗೂ ವಲಯ ಸಹಾಯಕ ಆಯುಕ್ತರವರಿಂದ ದೃಡೀಕೃತ ಹಾಜರಾತಿ ಪ್ರಮಾಣ ಪತ್ರಗಳನ್ನು ಪಡೆದ ಮೇಲೆ ಕಾರ್ಮಿಕ ಇಲಾಖೆಯ ಕನಿಷ್ಠ ವೇತನ ದರದಂತೆ ಗುತ್ತಿಗೆದಾರರಿಗೆ ವೇತನವನ್ನು ಪಾವತಿಸಲಾಗುತ್ತಿದೆ. |
| ಆ) | ವೇತನ ನೀಡಲು ವಿಳಂಬವಾಗಲು ಕಾರಣವೇನು? | ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಆಟೋ ಟಿಪ್ಪರ್ ಚಾಲಕರಿಗೆ ವೇತನ ನೀಡುವಲ್ಲಿ ಯಾವುದೇ ರೀತಿ ವಿಳಂಬವಾಗಿರುವುದಿಲ್ಲ. |

ನಅಇ 14 ಹೆಚ್‌ಡಿಎಂಸಿ 2023(ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು
ನಗರಾಭಿವೃದ್ಧಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 343 |
| ಸದಸ್ಯರ ಹೆಸರು | : | ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) |
| ಉತ್ತರಿಸಬೇಕಾದ ದಿನಾಂಕ | : | 24-02-2023 |
| ಉತ್ತರಿಸುವವರು | : | ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಹಾಗೂ ಸಹಾಯಕಿಯರು ಪದೇ ಪದೇ ಪ್ರತಿಭಟನೆ, ಸತ್ಯಾಗ್ರಹ ಹಾಗೂ ಧರಣಿ ನಡೆಸುತ್ತಿರುವುದು ರಾಜ್ಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ. | ಬಂದಿದ್ದರೆ, ಪ್ರತಿಭಟನೆ ಹಾಗೂ ಮುಷ್ಕರಕ್ಕೆ ಕಾರಣಗಳೇನು; ಅವರ ನ್ಯಾಯಯುತ ಬೇಡಿಕೆಗಳೇನು; ಯಾವ ಯಾವ ಬೇಡಿಕೆಗಳನ್ನು ಸರ್ಕಾರ ಈಡೇರಿಸಿದೆ; (ವಿವರ ನೀಡುವುದು) | ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರಿಗೆ ಉಪಧನ (Gratuity) ಪಾವತಿಸುವುದು, ಅಂಗನವಾಡಿ ಕೇಂದ್ರಗಳ ವೇಳಾಪಟ್ಟಿ ಬದಲಾಯಿಸುವುದು, ಯೋಜನೇತರ ಕರ್ತವ್ಯಗಳಿಗೆ ನಿಯೋಜಿಸದಿರುವುದು, ಸೇವಾ ನಿಯಮಾವಳಿ ರಚಿಸುವುದು, SSLC ಪಾಸಾದ ಸಹಾಯಕಿ / ಮಿನಿ ಅಂಗನವಾಡಿ ಕಾರ್ಯಕರ್ತೆಯರಿಗೆ ಮುಂಬಡ್ತಿ ನೀಡುವುದು, ಕನಿಷ್ಟ ವೇತನ ಹಾಗೂ ಇ.ಎಸ್.ಐ. ಸೌಲಭ್ಯ ಒದಗಿಸುವುದು ಇತ್ಯಾದಿ ಬೇಡಿಕೆ ಸಲ್ಲಿಸಿರುತ್ತಾರೆ<br><br>ಸರ್ಕಾರದ ಆದೇಶ ದಿನಾಂಕ: 04.02.2023 ರಲ್ಲಿ 2023-24ನೇ ಸಾಲಿನಿಂದ ಉಪಧನ (Gratuity) ಪಾವತಿಸಲು ಮಂಜೂರಾತಿ ನೀಡಲಾಗಿದೆ. ಅಂಗನವಾಡಿ ಕೇಂದ್ರಗಳ ವೇಳಾಪಟ್ಟಿಯನ್ನು ಬದಲಾಯಿಸಿ ಸುತ್ತೋಲೆ ಹೊರಡಿಸಲಾಗಿದೆ. ಯೋಜನೇತರ ಕೆಲಸಗಳಿಗೆ ನಿಯೋಜಿಸದಂತೆ ಪತ್ರ ಬರೆಯಲಾಗಿದೆ. ಸೇವಾ ನಿಯಮ ರಚಿಸಲು ಕ್ರಮ ವಹಿಸಲಾಗುತ್ತಿದೆ. SSLC ಪಾಸಾದ ಸಹಾಯಕಿಯರು / ಮಿನಿ ಅಂಗನವಾಡಿ ಕಾರ್ಯಕರ್ತೆಯರಿಗೆ ಮುಂಬಡ್ತಿ ನೀಡಲು ತಿದ್ದುಪಡಿ ಆದೇಶ ಹೊರಡಿಸಲಾಗಿದೆ. ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಸೇವೆಯು ಗೌರವ ಧನದ ಸೇವೆಯಾಗಿರುವುದರಿಂದ, ಕನಿಷ್ಟ ವೇತನ ಮತ್ತು ಇ.ಎಸ್.ಐ. ಸೌಲಭ್ಯಕ್ಕೆ ಅವಕಾಶವಿರುವುದಿಲ್ಲ. |
| ಇ. | ಈ ನೌಕರರುಗಳಿಗೆ ನೀಡುತ್ತಿರುವ ವೇತನ/ ಗೌರವಧನ/ ಇತರೆ ಭತ್ಯೆಗಳ ಮೊತ್ತ ಎಷ್ಟು; (ಪ್ರತ್ಯೇಕವಾಗಿ ವಿವರ ನೀಡುವುದು) | ಪ್ರಸ್ತುತ ಅಂಗನವಾಡಿ ಕಾರ್ಯಕರ್ತೆ, ಮಿನಿ ಅಂಗನವಾಡಿ ಕಾರ್ಯಕರ್ತೆ ಮತ್ತು ಅಂಗನವಾಡಿ ಸಹಾಯಕಿಯರಿಗೆ ನೀಡಲಾಗುತ್ತಿರುವ ಮಾಸಿಕ ಗೌರವಧನ ಈ ಕೆಳಕಂಡಂತಿರುತ್ತದೆ:- |

| ವಿವರ | ವಿಂಗಡನೆ | ಕೇಂದ್ರ ಸರ್ಕಾರವು ನಿಗದಿಪಡಿಸಿರುವ ಗೌರವಧನ | ರಾಜ್ಯ ಸರ್ಕಾರದಿಂದ ಹೆಚ್ಚುವರಿಯಾಗಿ ನೀಡುತ್ತಿರುವ ಗೌರವಧನ | ಒಟ್ಟು |
|---|---|---|---|---|
| ಅಂಗನವಾಡಿ ಕಾರ್ಯಕರ್ತೆ | 10 ವರ್ಷಕ್ಕಿಂತ ಕಡಿಮೆ ವರ್ಷ ಸೇವೆ ಸಲ್ಲಿಸಿದವರಿಗೆ | 4500 | 6500 | 11000 |
| | 10 ರಿಂದ 20 ವರ್ಷ ಸೇವೆ ಸಲ್ಲಿಸಿದವರಿಗೆ | | 6750 | 11250 |
| | 20 ಕ್ಕಿಂತ ಹೆಚ್ಚು ಸೇವೆ ಸಲ್ಲಿಸಿದವರಿಗೆ | | 7000 | 11500 |

| | | | | |
|---|---|---|---|---|
| **ಅಂಗನವಾಡಿ ಕಾರ್ಯಕರ್ತೆ** | 10 ವರ್ಷಕ್ಕಿಂತ ಕಡಿಮೆ ವರ್ಷ ಸೇವೆ ಸಲ್ಲಿಸಿದವರಿಗೆ | 4500 | 6500 | 11000 |
| | 10 ರಿಂದ 20 ವರ್ಷ ಸೇವೆ ಸಲ್ಲಿಸಿದವರಿಗೆ | | 6750 | 11250 |
| | 20 ಕ್ಕಿಂತ ಹೆಚ್ಚು ಸೇವೆ ಸಲ್ಲಿಸಿದವರಿಗೆ | | 7000 | 11500 |
| **ಮಿನಿ ಅಂಗನವಾಡಿ ಕಾರ್ಯಕರ್ತೆ** | 10 ವರ್ಷಕ್ಕಿಂತ ಕಡಿಮೆ ವರ್ಷ ಸೇವೆ ಸಲ್ಲಿಸಿದವರಿಗೆ | 3500 | 3750 | 7250 |
| | 10 ರಿಂದ 20 ವರ್ಷ ಸೇವೆ ಸಲ್ಲಿಸಿದವರಿಗೆ | | 4000 | 7500 |
| | 20 ಕ್ಕಿಂತ ಹೆಚ್ಚು ಸೇವೆ ಸಲ್ಲಿಸಿದವರಿಗೆ | | 4250 | 7750 |

| | | |
|---|---|---|
| ಈ. | ಈ ಗೌರವಧನ ಅಥವಾ ವೇತನದಲ್ಲಿ ಇವತ್ತಿನ ಬೆಲೆ ಏರಿಕೆಯಿಂದಾಗಿ ತಮ್ಮ ಕುಟುಂಬದ ಜೀವನ ಭದ್ರತೆಗೆ ಹಾಗೂ ಬೇಡಿಕೆಗಳನ್ನು ಈಡೇರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | 2022-23ನೇ ಸಾಲಿನಲ್ಲಿ ಆಯವ್ಯಯ ಭಾಷಣದಲ್ಲಿ ಘೋಷಿಸಿದಂತೆ ಅಂಗನವಾಡಿ ಕಾರ್ಯಕರ್ತೆ / ಸಹಾಯಕಿ ಮತ್ತು ಮಿನಿ ಅಂಗನವಾಡಿ ಕಾರ್ಯಕರ್ತೆಯರ ಸೇವಾ ಹಿರಿತನದ ಮೇಲೆ 20 ವರ್ಷಕ್ಕಿಂತ ಹೆಚ್ಚು ಸೇವೆ ಸಲ್ಲಿಸಿದವರಿಗೆ ರೂ.1,500/-, 10-20 ವರ್ಷ ಸೇವೆ ಸಲ್ಲಿಸಿದವರಿಗೆ ರೂ.1,250/- ಮತ್ತು 10 ವರ್ಷಕ್ಕಿಂತ ಕಡಿಮೆ ಸೇವೆ ಸಲ್ಲಿಸಿದವರಿಗೆ ರೂ.1,000/-ಗಳ ಗೌರವಧನವನ್ನು ಹೆಚ್ಚಿಸಿ ಆದೇಶಿಸಲಾಗಿದೆ. |

**ಸಂಖ್ಯೆ:ಮಮಇ 48 ಐಸಿಡಿ 2023**

Halappa

**(ಆಚಾರ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ವಿಕಲಚೇತನರ ಹಾಗೂ
ಹಿರಿಯ ನಾಗರೀಕರ ಸಬಲೀಕರಣ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 344

ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)

ಉತ್ತರಿಸಬೇಕಾದ ದಿನಾಂಕ : 24-02-2023

ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿರುವ ಒಟ್ಟು ಅಂಗನವಾಡಿ ಹಾಗೂ ಉಪ ಅಂಗನವಾಡಿ ಕೇಂದ್ರುಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಲ್ಲಿ ಒಟ್ಟು 63030 ಅಂಗನವಾಡಿ ಕೇಂದ್ರುಗಳು ಹಾಗೂ 3331 ಮಿನಿ ಅಂಗನವಾಡಿ ಕೇಂದ್ರುಗಳು ಕಾರ್ಯನಿರ್ವಹಿಸುತ್ತಿದೆ. ಜಿಲ್ಲಾವಾರು ವಿವರವನ್ನು **ಅನುಬಂಧ-1ರಲ್ಲಿ** ಒದಗಿಸಿದೆ. |
| ಆ. | ಇವುಗಳಲ್ಲಿ ಎಷ್ಟು ಅಂಗನವಾಡಿ ಕೇಂದ್ರುಗಳು ಸ್ವಂತ ಕಟ್ಟಡಗಳನ್ನು ಹೊಂದಿವೆ ಹಾಗೂ ಬಾಕಿ ಇರುವ ಅಂಗನವಾಡಿಗಳಿಗೆ ಯಾವಾಗ ಸ್ವಂತ ಕಟ್ಟಡಗಳನ್ನು ಒದಗಿಸಲಾಗುವುದು; | 46300 ಅಂಗನವಾಡಿ ಕೇಂದ್ರುಗಳು ಸ್ವಂತ ಕಟ್ಟಡಗಳನ್ನು ಹೊಂದಿವೆ. ಬಾಕಿ ಇರುವ ಅಂಗನವಾಡಿಗಳಿಗೆ ನಿವೇಶನ ಮತ್ತು ಅನುದಾನದ . ಲಭ್ಯತೆಯ ಮೇರೆಗೆ ಸ್ವಂತ ಕಟ್ಟಡಗಳನ್ನು ನಿರ್ಮಿಸಲು ಕ್ರಮವಹಿಸಲಾಗುತ್ತಿದೆ. |
| ಇ. | ಸಮಗ್ರ ಮಕ್ಕಳ ಅಭಿವೃದ್ಧಿ ಯೋಜನೆಯ ಉದ್ದೇಶಗಳೇನು; (ವಿವರ ನೀಡುವುದು) | ಸಮಗ್ರ ಮಕ್ಕಳ ಅಭಿವೃದ್ಧಿ ಯೋಜನೆಯು ಈ ಕೆಳಕಂಡಂತಿವೆ.<br>• 0-6 ವರ್ಷದ ಮಕ್ಕಳ ಆರೋಗ್ಯ, ಪೌಷ್ಠಿಕ ಮಟ್ಟವನ್ನು ವೃದ್ದಿಸುವುದು.<br>• ಮಗುವಿನ ದೈಹಿಕ, ಮಾನಸಿಕ ಮತ್ತು ಸಾಮಾಜಿಕ ಬೆಳವಣಿಗೆಗೆ ಭದ್ರ ಅಡಿಪಾಯ ಹಾಕುವುದು.<br>• ಮಕ್ಕಳಲ್ಲಿ ಸಾವು, ಅನಾರೋಗ್ಯ, ಅಪೌಷ್ಠಿಕತೆ ಮತ್ತು ಶಾಲಾ ಬಿಡುವಿಕೆಯನ್ನು ಕಡಿಮೆಗೊಳಿಸುವುದು.<br>• ಶಿಶು ಅಭಿವೃದ್ಧಿ ಕಾರ್ಯಕ್ರಮವನ್ನು ಉತ್ತಮಗೊಳಿಸುವ ಕಾರ್ಯನೀತಿ ಮತ್ತು ಅನುಷ್ಠಾನಗೊಳಿಸುವ ದೆಸೆಯಲ್ಲಿ ಪರಿಣಾಮಕಾರಿಯಾದ ಸಮನ್ವಯತೆಯನ್ನು ಸಾಧಿಸುವುದು.<br>• ಆರೋಗ್ಯ ಮತ್ತು ಪೌಷ್ಠಿಕತೆಯ ಶಿಕ್ಷಣವನ್ನು ನೀಡುವುದರ ಮೂಲಕ ತಾಯಂದಿರಲ್ಲಿ ತಮ್ಮ ಮಕ್ಕಳ ಆರೋಗ್ಯ ಮತ್ತು ಪೌಷ್ಠಿಕತೆಯ ಅಗತ್ಯಗಳನ್ನು ಸರಿಯಾಗಿ ನೋಡಿಕೊಳ್ಳುವ ಸಾಮರ್ಥ್ಯವನ್ನು ಹೆಚ್ಚಿಸುವುದು. |
| ಈ. | ಈ ಯೋಜನೆಯಡಿ ರಾಜ್ಯದಲ್ಲಿ ಹೊಸದಾಗಿ ಎಷ್ಟು ಅಂಗನವಾಡಿ ಕೇಂದ್ರುಗಳನ್ನು ಮಂಜೂರು ಮಾಡಲಾಗಿದೆ; ಹಾಗೂ ಯಾವಾಗ ಮಂಜೂರು ಮಾಡಲಾಗುವುದು; ಮಂಜೂರು ಮಾಡಲು ಮಾನದಂಡಗಳೇನು; (ಜಿಲ್ಲಾವಾರು ಹಾಗೂ ವಿಧಾನಸಭಾ ಕ್ಷೇತ್ರವಾರು ವಿವರ ನೀಡುವುದು) | ಈ ಯೋಜನೆಯಡಿಯಲ್ಲಿ ರಾಜ್ಯದಲ್ಲಿ ಹೊಸದಾಗಿ 4244 ಅಂಗನವಾಡಿ ಕೇಂದ್ರುಗಳನ್ನು ಪ್ರಾರಂಭಿಸಲು ಈಗಾಗಲೇ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ. 3538 ಅಂಗನವಾಡಿ ಕೇಂದ್ರುಗಳನ್ನು ಪ್ರಾರಂಭಿಸಲು ಜಿಲ್ಲೆಗಳಿಂದ ಬೇಡಿಕೆಯು ಸ್ವೀಕೃತವಾಗಿರುತ್ತದೆ. ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ, ನಗರ ಹಾಗೂ ಗ್ರಾಮೀಣ ಪ್ರದೇಶದಲ್ಲಿ 400-800 ಜನಸಂಖ್ಯೆಗೆ ಒಂದು ಅಂಗನವಾಡಿ ಕೇಂದ್ರುವನ್ನು, ಗುಡ್ಡಗಾಡು ಪ್ರದೇಶದಲ್ಲಿ 300-800 ಜನಸಂಖ್ಯೆಗೆ ಒಂದು ಅಂಗನವಾಡಿ ಕೇಂದ್ರುವನ್ನು ತೆರೆಯಬಹುದಾಗಿರುತ್ತದೆ.<br>3538 ಅಂಗವನಾಡಿ ಕೇಂದ್ರುಗಳ ಜಿಲ್ಲಾವಾರು ಹಾಗೂ ವಿಧಾನಸಭಾ ಕ್ಷೇತ್ರವಾರು ವಿವರವನ್ನು**ಅನುಬಂಧ – 2** ರಲ್ಲಿ ಒದಗಿಸಿದೆ. |

| | | |
|---|---|---|
| ಉ. | ಹೊಸದಾಗಿ ಮಂಜೂರು ಮಾಡಲಾಗಿರುವ ಅಂಗನವಾಡಿ ಕೇಂದ್ರಗಳು ಯಾವಾಗ ಕಾರ್ಯಾರಂಭ ಮಾಡಲಿವೆ; | ಮಂಜೂರು ಮಾಡಲಾಗಿರುವ ಅಂಗನವಾಡಿ ಕೇಂದ್ರಗಳನ್ನು ನಡೆಸಲು ಸ್ಥಳಗಳನ್ನು ಗುರುತಿಸಲಾಗಿದ್ದು, ಮಾರ್ಚ್-2023ರ ಅಂತ್ಯದೊಳಗಾಗಿ ಪ್ರಾರಂಭಿಸಲು ಕ್ರಮವಹಿಸಲಾಗುತ್ತಿದೆ. |
| ಊ. | ಈ ಯೋಜನೆಯಡಿ ಎಷ್ಟು ಮಹಿಳೆಯರಿಗೆ ಉದ್ಯೋಗ ಅವಕಾಶಗಳು ದೊರೆಯಲಿದೆ; | ಈ ಯೋಜನೆಯಡಿ ಒಟ್ಟು 4244 ಅಂಗನವಾಡಿ ಕಾರ್ಯಕರ್ತೆ ಹಾಗೂ 4244 ಸಹಾಯಕಿಯರಿಗೆ ಉದ್ಯೋಗ ಅವಕಾಶ ದೊರೆಯಲಿದೆ. |
| ಋ. | ರಾಜ್ಯದಲ್ಲಿ ಹಾಲಿ ಇರುವ ಅಂಗನವಾಡಿ ಕೇಂದ್ರಗಳಲ್ಲಿ ಖಾಲಿ ಇರುವ ಸಹಾಯಕಿಯರ ಹಾಗೂ ಶಿಕ್ಷಕಿಯರ ಹುದ್ದೆಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಹಾಗೂ ಅಂಗನವಾಡಿವಾರು ವಿವರ ನೀಡುವುದು) | ರಾಜ್ಯದಲ್ಲಿ ಪ್ರಸ್ತುತ 1632 ಅಂಗನವಾಡಿ ಕಾರ್ಯಕರ್ತೆಯರ ಹುದ್ದೆಗಳು ಹಾಗೂ 3403 ಅಂಗನವಾಡಿ ಸಹಾಯಕಿಯರ ಹುದ್ದೆಗಳು ಖಾಲಿ ಇರುತ್ತವೆ. ಜಿಲ್ಲಾವಾರು ಮಾಹಿತಿಯನ್ನು **ಅನುಬಂಧ-3ರಲ್ಲಿ** ಒದಗಿಸಿದೆ. |
| ಎ. | ಈ ಹುದ್ದೆಗಳಿಗೆ ನೇಮಕಾತಿ ಮಾಡುವಾಗ/ವಿದ್ಯಾರ್ಹತೆಯ ಆಯ್ಕೆಯ ಮಾನದಂಡಗಳೇನು; ಖಾಲಿ ಇರುವ ಹುದ್ದೆಗಳನ್ನು ಯಾವ ಕಾಲಮಿತಿಯೊಳಗೆ ಭರ್ತಿ ಮಾಡಿಕೊಳ್ಳಲಾಗುವುದು? (ವಿವರ ನೀಡುವುದು) | ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರನ್ನು ನೇಮಕ ಮಾಡಲು ಸರ್ಕಾರದ ಆದೇಶ ಸಂಖ್ಯೆ: ಮಮಇ 154 ಐಸಿಡಿ 2020, ದಿನಾಂಕ: 03.12.2022ರಲ್ಲಿ ಪರಿಷ್ಕೃತ ಮಾರ್ಗಸೂಚಿ ಹೊರಡಿಸಿದೆ. ಸದರಿ ಆದೇಶದಲ್ಲಿ ಅನುಸರಿಸಬೇಕಾದ ಮಾನದಂಡಗಳ ಬಗ್ಗೆ ತಿಳಿಸಲಾಗಿರುತ್ತದೆ. ಮಾನದಂಡಗಳ ಆದೇಶವನ್ನು **ಅನುಬಂಧ-4 ರಲ್ಲಿ** ಒದಗಿಸಿದೆ.<br><br>ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಖಾಲಿಯಾದ ಹುದ್ದೆಗಳ ಆಯ್ಕೆ ಕುರಿತಂತೆ ಆಗಿಂದಾಗ್ಗೆ ಆನ್‌ಲೈನ್‌ನಲ್ಲಿ ಅರ್ಜಿಗಳನ್ನು ಆಹ್ವಾನಿಸಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಜಿಲ್ಲಾ ಸಮಿತಿಯ ಮೂಲಕ ಆಯ್ಕೆ ಪ್ರಕ್ರಿಯೆಯನ್ನು ಕೈಗೊಳ್ಳಲಾಗುವುದು. |

**ಸಂಖ್ಯೆ:ಮಮಇ 51 ಐಸಿಡಿ 2023**

Halappa B

**(ಆಚಾರ ಹಾಲಪ್ಪ, ಬಸಪ್ಪ)**
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

| ಶ್ರೀ.ಯಶವಂತರಾಯಗೌಡ ವಿಠ್ಠಲಗೌಡ್ ಪಾಟೀಲ್ (ಇಂಡಿ) ವಿಧಾನ ಸಭೆಯ ಸದಸ್ಯರು ಕೇಳಿರುವ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:344ಕ್ಕೆ ಅನುಬಂಧ-1 | | |
|---|---|---|
| ಕ್ರ.ಸಂ | ಜಿಲ್ಲೆಯ ಹೆಸರು | ಒಟ್ಟು ಮಂಜೂರಾಗಿರುವ ಅಂಗನವಾಡಿ ಕೇಂದ್ರಗಳ ಸಂಖ್ಯೆ |
| 1 | ಬಾಗಲಕೋಟೆ | 2221 |
| 2 | ಬೆಂಗಳೂರು ಗ್ರಾ | 1230 |
| 3 | ಬೆಂಗಳುರು ನಗರ | 2587 |
| 4 | ಬೆಳಗಾವಿ | 5331 |
| 5 | ಬಳ್ಳಾರಿ | 1266 |
| 6 | ಬೀದರ | 1898 |
| 7 | ವಿಜಯಪುರ | 2331 |
| 8 | ಚಾಮರಾಜನಗರ | 1425 |
| 9 | ಚಿಕ್ಕಮಗಳೂರು | 1825 |
| 10 | ಚಿಕ್ಕಬಳ್ಳಾಪುರ | 1964 |
| 11 | ಚಿತ್ರದುರ್ಗ | 2333 |
| 12 | ದಕ್ಷಿಣ ಕನ್ನಡ | 2108 |
| 13 | ದಾವಣಗೆರೆ | 1730 |
| 14 | ಧಾರವಾಡ | 1511 |
| 15 | ಗದಗ | 1166 |
| 16 | ಕಲಬುರಗಿ | 3140 |
| 17 | ಹಾಸನ | 2548 |
| 18 | ಹಾವೇರಿ | 1918 |
| 19 | ಕೊಡಗು | 871 |
| 20 | ಕೋಲಾರ | 2080 |
| 21 | ಕೊಪ್ಪಳ | 1850 |
| 22 | ಮಂಡ್ಯ | 2546 |
| 23 | ಮೈಸೂರು | 2875 |
| 24 | ರಾಯಚೂರು | 2668 |
| 25 | ರಾಮನಗರ | 1543 |
| 26 | ಶಿವಮೊಗ್ಗ | 2460 |
| 27 | ತುಮಕೂರು | 4109 |
| 28 | ಉಡುಪಿ | 1191 |
| 29 | ಉತ್ತರ ಕನ್ನಡ | 2687 |
| 30 | ವಿಜಯನಗರ | 1562 |
| 31 | ಯಾದಗಿರಿ | 1387 |
| ಒಟ್ಟು | | **66361** |

## ಶ್ರೀ.ಯಶವಂತರಾಯಗೌಡ ವಿಠ್ಠಲಗೌಡ್ ಪಾಟೀಲ್ (ಇಂಡಿ) ವಿಧಾನ ಸಭೆಯ ಸದಸ್ಯರು ಕೇಳಿರುವ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:344ಕ್ಕೆ ಅನುಬಂಧ-2

| ಕ್ರ. ಸಂ. | ಜಿಲ್ಲೆ ಹೆಸರು | ಜಿಲ್ಲೆಯಿಂದ ಸಲ್ಲಿಸಿರುವ ಅಂಗನವಾಡಿ ಕೇಂದ್ರಗಳ ಬೇಡಿಕೆ ಸಂಖ್ಯೆ | ವಿಧಾನಸಭಾ ಕ್ಷೇತ್ರದ ವಿವರ | | | ಹೊಸದಾಗಿ ಪ್ರಾರಂಭಿಸಲು ಗುರುತಿಸಿರುವ ಅಂಗನವಾಡಿ ಕೇಂದ್ರದ ಹೆಸರು/ಗ್ರಾಮದ ಹೆಸರು |
|---|---|---|---|---|---|---|
| | | | ಕ್ರ. ಸಂ. | ನಂ. | ಕ್ಷೇತ್ರದ ಹೆಸರು | |
| 1 | 2 | 3 | 4 | 5 | 6 | 8 |
| | | | 32 | 181 | ನೆಲಮಂಗಲ | 15 |
| ಒಟ್ಟು | | | | | | 47 |
| 3 | ರಾಮನಗರ | 43 | 33 | 182 | ಮಾಗಡಿ | 7 |
| | | | 34 | 183 | ರಾಮನಗರಂ | 8 |
| | | | 35 | 184 | ಕನಕಪುರ | 20 |
| | | | 36 | 185 | ನೆಲಮಂಗಲ | 4 |
| | | | 37 | 186 | ಚನ್ನಪಟ್ಟಣ | 4 |
| ಒಟ್ಟು | | | | | | 43 |
| 4 | ಚಿತ್ರದುರ್ಗ | 95 | 38 | 97 | ಮೊಳಕಾಲ್ಮೂರು | 30 |
| | | | 39 | 98 | ಚಳ್ಳಕೆರೆ | 32 |
| | | | 40 | 99 | ಚಿತ್ರದುರ್ಗ | 8 |
| | | | 41 | 100 | ಹಿರಿಯೂರು | 6 |
| | | | 42 | 101 | ಹೊಸದುರ್ಗ | 2 |
| | | | 43 | 102 | ಹೊಳಲ್ಕೆರೆ | 17 |
| ಒಟ್ಟು | | | | | | 95 |
| 5 | ದಾವಣಗೆರೆ | 41 | 44 | 103 | ಜಗಳೂರು | 8 |
| | | | 45 | 104 | ಹರಪನಹಳ್ಳಿ | 0 |
| | | | 46 | 105 | ಹರಿಹರ | 4 |
| | | | 47 | 106 | ದಾವಣಗೆರೆ ಉತ್ತರ | 17 |
| | | | 48 | 107 | ದಾವಣಗೆರೆ ದಕ್ಷಿಣ | 10 |
| | | | 49 | 108 | ಮಾಯಕೊಂಡ | 2 |
| | | | 50 | 109 | ಚನ್ನಗಿರಿ | 0 |
| | | | 51 | 110 | ಹೊನ್ನಾಳಿ | 0 |
| ಒಟ್ಟು | | | | | | 41 |
| 6 | ಶಿವಮೊಗ್ಗ | 103 | | | | |
| | | | 52 | 111 | ಶಿವಮೊಗ್ಗ ಗ್ರಾಮಾಂತರ | 16 |
| | | | 53 | 112 | ಭದ್ರಾವತಿ | 4 |
| | | | 54 | 113 | ಶಿವಮೊಗ್ಗ | 20 |
| | | | 55 | 114 | ತೀರ್ಥಹಳ್ಳಿ | 2 |
| | | | 56 | 115 | ಶಿಕಾರಿಪುರ | 11 |
| | | | 57 | 116 | ಸೊರಬ | 29 |

| | | | |
|---|---|---|---|
| 46 | ಬಗಲಿ ಲೇಔಟದಲ್ಲಿ ಪೂಜಾರಿ ಮನೆಯಿಂದ ಬಸು ಅಗಸರ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವುದು | 50 | 10.00 |
| 47 | ಕುಂಬಾರ ಓಣಿಯ ರವಿ ಕಂಬಾರ ಮನೆಯಿಂದ ಅರವಿಂದೋ ಸ್ಕೂಲವರೆಗೆ ಡಾಂಬರಿಕರಣ ರಸ್ತೆ ಮಾಡುವುದು | 300 | 25.00 |
| | **ವಾರ್ಡ ನಂ.13** | | |
| 48 | ಸಿಂದಗಿ ರಸ್ತೆಯಿಂದ ಡಗ್ರಿ ಕಾಲೇಜ ಕಂಪೌಂಡ ವರೆಗೆ ಡಾಂಬರಿಕರಣ ರಸ್ತೆ ಮಾಡುವುದು | 85.00 | 20.00 |
| 49 | ಸಿಂದಗಿ ರಸ್ತೆಯಿಂದ ಶಹಾ ಪಬ್ಲಿಕ ಶಾಲೆಯ ವರೆಗೆ ಡಾಂಬರಿಕರಣ ರಸ್ತೆ ಮಾಡುವುದು | 150.00 | 25.00 |
| 50 | ಹಳೆ ಸಾಲೂಟಗಿ ರಸ್ತೆಯ ಪಕ್ಕ ಕೊಪ್ಪ ಅವರ ಮನೆಯಿಂದ ಚನ್ನು ಗೌಡ ಮನೆ ವರೆಗೆ ಡಾಂಬರಿಕರಣ ರಸ್ತೆ ಮಾಡುವುದು | 100.00 | 15.00 |
| 51 | ಹಳೆ ಸಾಲೂಟಗಿ ರಸ್ತೆಯ ಪಕ್ಕ ಡಂಗಾಅವರ ಮನೆಯಿಂದ ಕೊಳಕರ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವುದು | 100.00 | 15.00 |
| 52 | ಕೊಪ್ಪಾಅವರ ಮನೆಯಿಂದ ಡಂಗಾ ಅವರ ಮನೆಯ ವರೆಗೆ ಡಾಂಬರಿಕರಣ ರಸ್ತೆ ಮಾಡುವುದು | 80.00 | 10.00 |
| | **ವಾರ್ಡ ನಂ.14** | | |
| 53 | ಜಾವೀದ ಮೋಮಿನ ಮನೆಯಿಂದ ಉಸ್ಮಾನ ಶೇಖ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವುದು | 500 | 45.00 |
| 54 | ಬಾಬು ಬಳ್ಳಾರಿಮನೆಯಿಂದ ಹಿರೇ ಇಂಡಿ ರಸ್ತೆ ವರೆಗ ಡಾಂಬರಿಕರಣ ರಸ್ತೆ ಮಾಡುವುದು | 250 | 20.00 |
| 55 | ಭಾರಪೇಟ ಮಸುತಿಯಿಂದ ಪುರಸಭೆ ಕಾರ್ಯಾಲಯದ ವರೆಗೆ ಡಾಂಬರಿಕರಣ ರಸ್ತೆ ಮಾಡುವುದು | 250 | 20.00 |
| | **ವಾರ್ಡ ನಂ15** | | |
| 56 | ಅಂಜುಮನ ಕಂಪೌಂಡದಿಂದ ಹಿರೆ ಇಂಡಿ ರಸ್ತೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 400 | 35.00 |
| 57 | ಜೈನಬಸ್ತಿಯಿಂದ ಇಮಾನದಾರ ಮನೆವರೆಗೆ ಡಾಂಬರಿಕರಣ ರಸ್ತೆ ಮಾಡುವದು | 200 | 20.00 |
| 58 | ಅಂಜುಮನ ಮಸುತಿಯಿಂದ ಇಲಿಯಾಸ ಮಂದ್ರೂಪ ಮನೆಯವರೆಗ ಡಾಂಬರಿಕರಣ ರಸ್ತೆ ಮಾಡುವದು | 500 | 50.00 |
| | ಶಿಖ ದವಾಖಾನೆಯಿಂದ ಕಾವಿ ದವಾಖಾನೆ ವರೆಗೆ ಡಾಂಬರಿಕರಣ ರಸ್ತೆ ಮಾಡುವದು | 300 | 30.00 |
| | **ವಾರ್ಡ ನಂ.16** | | |
| 59 | ಜೋಶಿ ಕಾಪ್ಲೇಕ್ಸಿಂದ ಹಳೆ ಬೊಳೆಗಾಂವ ರಸ್ತೆ ವರೆಗೆ ಡಾಂಬರಿಕರಣ ರಸ್ತೆ ಮಾಡುವದು | 200 | 20.00 |
| 60 | ಪ್ರದೀಪ.ಮೂರಮನ ಮನೆಯಿಂದ ಮೇಗಾ ಮಾರ್ಕೆಟ ವರೆಗೆ ಡಾಂಬರಿಕರಣ ರಸ್ತೆ ಮಾಡುವದು | 200 | 20.00 |

| | | | |
|---|---|---|---|
| 61 | ಟಿಪ್ಪುಸುಲ್ತಾನ ಸರ್ಕಲ್‌ದಿಂದ ಟಿ.ಪಿ ಕ್ವಾಟರ್ಸವರೆಗೆ ಡಾಂಬರಿಕರಣ ರಸ್ತೆ ಮಾಡುವದು | 80 | 10.00 |
| | ವಾರ್ಡ ನಂ.17 | | |
| 62 | ಬಾಗವಾನ ಶಕೀಲ ಮನೆಯಿಂದ ಶರೀಫ ಪಟೇಲ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 250 | 20.00 |
| 63 | ಎಮ್.ಜಿ.ಪಾಟೀಲ ಮನೆಯಿಂದ ಕರ್ಜಗಿ ಸರ್ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 250 | 20.00 |
| 64 | ಕರ್ನಾಟಕ ಬ್ಯಾಂಕನಿಂದ ಇಬ್ರಾಹಿಂ ಅಡ್ಡೆವಾಲೆ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 250 | 20.00 |
| | ವಾರ್ಡ ನಂ.18 | | |
| 65 | ರಾಜು ಕಾಮತೆ ಮನೆಯಿಂದ ಮಲ್ಲು ಹಾವಿನಾಳ ಮಠ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 60.00 | 10.00 |
| 66 | ಶಾಂತಗೌಡರ ಮನೆಯಿಂದ ಕೊಡತೆ ಸರ್ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 60.00 | 10.00 |
| 67 | ಆರ್.ಡಿ ಶಹಾ ಮನೆಯಿಂದ ಸೂರ್ಯಕಾಂತ ಕಾಳೆ ಅವರ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 300.00 | 25.00 |
| 68 | ಮ್ಯೂರಮನ ಮನಿಯಿಂದ ಲೋಣಿಕರ ಮನೆಯವರೆ ಡಾಂಬರಿಕರಣ ರಸ್ತೆ ಮಾಡುವದು | 250.00 | 20.00 |
| 69 | ಬನಸೋಡೆ ಸರ ಮನೆಯಿಂದ ಧರೇಣ್ಣವರ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 150.00 | 15.00 |
| 70 | ಟಿ.ವ್ಹಿ.ಎಸ್ ಶೋರೂಮನಿಂದ ಗಾಯಕವಾಡ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 150.00 | 15.00 |
| 71 | ಬಿದರ ಮೇಸ್ತ್ರೀ ಗ್ಯಾರೇಜನಿಂದ ರಮೇಶ ಇಮ್ಮನದರ ಅವರ ಮನೆಯ ವರೆಗೆ ಡಾಂಬರಿಕರಣ ರಸ್ತೆ ಮಾಡುವದು | 150.00 | 15.00 |
| 72 | ಅಬಕಾರಿ ಕಛೇರಿಯಿಂದ ಗೋಣಸಗಿ ಅವರ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 500.00 | 45.00 |
| 73 | ಅಲ್ಲಖಾದೀರ ಶಾಲೆಯಿಂದ ಹಿಟ್ನಳ್ಳಿ ಸರ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 250.00 | 20.00 |
| | ವಾರ್ಡ ನಂ.19 | | |
| 74 | ಕುಲಕರ್ಣಿಯವರ ಮನೆಯಿಂದ ಬಜಂತ್ರಿ ಮನೆವರೆಗ ಡಾಂಬರಿಕರಣ ರಸ್ತೆ ಮಾಡುವದು | 150.00 | 15.00 |
| 75 | ಮಹಾದೇವ ಕುಂಬಾರ ಮನೆಯಿಂದ ಬೀರಪ್ಪ ಗುಡಿವರೆಗೆ ಡಾಂಬರಿಕರಣ ರಸ್ತೆ ಮಾಡುವದು | 200.00 | 20.00 |
| 76 | ಸಾಲೋಟಗಿ ಗೌಡರ ಮನೆಯಿಂದ ಫಿಲ್ಟರಬೇಡ್ಡ ವರೆಗೆ ಡಾಂಬರಿಕರಣ ರಸ್ತೆ ಮಾಡುವದು | 100.00 | 10.00 |
| | ವಾರ್ಡ ನಂ.20 | | |

| | | | |
|---|---|---|---|
| 77 | ಲಕ್ಷ್ಮಣ.ಚವ್ಹಾಣ ಮನೆಯಿಂದ ರವಿ ರಾಠೋಡ ಡಾಂಬರಿಕರಣ ರಸ್ತೆ ಮಾಡುವದು | 100 | 10.00 |
| 78 | ಸೇವಾಲಾಲಗುಡಿ ಎಡಭಾಗದಿಂದ ಬರಟಗಿ ಮಲ್ಲಿಕಾರ್ಜುನ ಮನೆಯುವರೆಗೆ ಡಾಂಬರಿಕರಣ ರಸ್ತೆ ಮಾಡುವದು | 150 | 15.00 |
| 79 | ಪಂಡಿತ.ರಾಠೋಡ ಮನೆಯಿಂದ ಮಲ್ಲು ಜಾಧವ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 150 | 15.00 |
| 80 | ಬುಡ್ಡರ ಮನೆಯಿಂದ ಶಾಂತಪ್ಪ ಕಡಲೆವಾಡ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 200 | 20.00 |
| 81 | ಕೆ.ಇ.ಬಿ ಕನ್ನಡ ಶಾಲೆಯಿಂದ ರುಕ್ಮುವರ ಮನೆಯಿಂದ ಆಳೂರ ಮನೆಯವರೆಗೆ ಜಗದೇವ ರಾಠೋಡ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 200 | 20.00 |
| 82 | ಬಜಾಜ ಶೋರೂಂನಿಂದ ಕಾಳೆ ಸರ್ ಮನೆಯವರೆಗೆ ಮತ್ತು ಬರಟಗಿ ಸರ ಮನೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 200 | 20.00 |
| 83 | ಜಗನ್ನಾಥ ಸರ್ ಮನೆಯಿಂದ ಹಳೆ ಬೊಳೆಗಾಂವ ರೋಡ ವರೆಗೆ ಡಾಂಬರಿಕರಣ ರಸ್ತೆ ಮಾಡುವದು | 200 | 20.00 |
| 84 | ಬರಟಗಿ ಯವರ ಮನೆಯಿಂದ ಹಳೆ ಬೋಳೆಗಾಂವ ರಸ್ತೆಯವರೆಗೆ ಡಾಂಬರಿಕರಣ ರಸ್ತೆ ಮಾಡುವದು | 150 | 15.00 |
| | **ವಾರ್ಡ ನಂ.21** | | |
| 85 | ವಿಜಯಪುರ ರಸ್ತೆ ಎಳಸಂಗಿ ಖಡಿಮಶಿನದಿಂದ ಮದ್ದುನತಾಂಡಾ ಡಾಂಬರಿಕರಣ ರಸ್ತೆ ಮಾಡುವದು | 1000 | 100.00 |
| 86 | ಅಕ್ಕಮಹಾದೇವಿ ಮಠದಿಂದ ಲಾಳಸಂಗಿಯುವರ ಹೊಲದ ವರೆಗೆ ಡಾಂಬರಿಕರಣ ರಸ್ತೆ ಮಾಡುವದು | 800 | 85.00 |
| | **ಒಟ್ಟು** | | **2815.00** |

ಮುಖ್ಯಾಧಿಕಾರಿ
ಪುರಸಭೆ ಇಂಡಿ



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಪ್ರಿಯಾಂಕ್ ಎಂ.ಖರ್ಗೆ (ಚಿತ್ತಾಪುರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 348 |
| ಉತ್ತರಿಸುವ ಸಚಿವರು | : | ಮಾನ್ಯ ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 24-02-2023. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮೆ॥ ಗುಲ್ಬರ್ಗಾ ಟೆಕ್ಸ್ ಟೈಲ್ ಪಾರ್ಕ್ ಪ್ರೈ., ಲಿ ಕಲಬುರಗಿ ಈ ಸಂಸ್ಥೆಯಲ್ಲಿ ನಡೆದಿರುವ ಅವ್ಯವಹಾರಗಳ ಕುರಿತು ತನಿಖೆ ನಡೆಸಿ ತಪ್ಪಿತಸ್ಥರ ವಿರುದ್ಧ ಶಿಸ್ತು ಕ್ರಮಕ್ಕಾಗಿ ದೋಷರೋಪ ಪಟ್ಟಿಯನ್ನು ಸಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ, ತನಿಖಾಧಿಕಾರಿಗಳು ಯಾವ ದಿನಾಂಕ ದಂದು ಸರ್ಕಾರಕ್ಕೆ ದೋಷರೋಪಣ ಪಟ್ಟಿ ಸಲ್ಲಿಸಿದ್ದಾರೆ ಹಾಗೂ ತಪ್ಪಿತಸ್ಥರ ವಿರುದ್ಧ ಸರ್ಕಾರ ಕೈಗೊಂಡ ಕ್ರಮವೇನು;(ಮಾಹಿತಿ ನೀಡುವುದು) | ಜವಳಿ ಅಭಿವೃದ್ಧಿ ಆಯುಕ್ತರ ಕಛೇರಿ ಪತ್ರ ಸಂಖ್ಯೆ: DHTADMN0EST(ENQ)/1/2021, ದಿನಾಂಕ:10-02-2022 ರಂದು ಸರ್ಕಾರಕ್ಕೆ ದೋಷರೋಪಣ ಪಟ್ಟಿ ಸಲ್ಲಿಸಿರುತ್ತಾರೆ. ಆರೋಪಿತ 03 ಜನ ಅಧಿಕಾರಿಗಳಿಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ-11 ರನ್ವಯ ಕಾರಣ ಕೇಳುವ ನೋಟೀಸ್ ಜಾರಿಗೊಳಿಸಲಾಗಿದೆ. |
| ಇ) | ತನಿಖಾಧಿಕಾರಿಗಳ ವರದಿಗೆ ಸಂಬಂಧಿಸಿ ದಂತೆ ಸರ್ಕಾರವು ತಪ್ಪಿಸ್ಥರ ವಿರುದ್ಧ ಯಾವುದೇ ಕ್ರಮಕೈಗೊಳ್ಳದಿದ್ದಲ್ಲಿ, ಕಾರಣವೇನು ಹಾಗೂ ದೋಷಾ ರೋಪಣ ಪಟ್ಟಿಯು ಸರ್ಕಾರದ ಯಾವ ಹಂತದಲ್ಲಿದೆ;(ಮಾಹಿತಿ ನೀಡುವುದು) | ಆರೋಪಿತ ಅಧಿಕಾರಿಗಳು ವಿವಿಧ ದಿನಾಂಕಗಳಂದು ಪ್ರತಿ ರಕ್ಷಣಾ ಹೇಳಿಕೆಗಳನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಪರಿಶೀಲನಾ ಹಂತದಲ್ಲಿರುತ್ತದೆ. |
| ಈ) | ತನಿಖಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿರುವ ದೋಷಾರೋಪಣ ವರದಿಯ ಪ್ರತಿಯನ್ನು ಒದಗಿಸುವುದು ಹಾಗು ಎಷ್ಟು ದಿನಗಳೊಳಗೆ ತಪ್ಪಿತಸ್ಥರ ವಿರುದ್ಧ ಕ್ರಮ ಕೈಗೊಳ್ಳಲಾಗುವುದು? (ಮಾಹಿತಿ ನೀಡುವುದು) | ಆರೋಪಿತ ಅಧಿಕಾರಿಗಳು ಸಲ್ಲಿಸಿರುವ ಹೇಳಿಕೆಗಳ ಸತ್ಯಾಸತ್ಯಾತೆಗಳನ್ನು ತಿಳಿಯಲು ಸದರಿ ಪ್ರಕರಣದಲ್ಲಿ ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವ ಕುರಿತು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |

ಸಂಖ್ಯೆ: CI 35 JAKE 2023

(ಶಂಕರ ಬ. ಪಾಟೀಲ ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 349 |
| ಸದಸ್ಯರ ಹೆಸರು | ಡಾ|| ಭರತ್ ಶೆಟ್ಟಿ ವೈ. |
| ಉತ್ತರಿಸಬೇಕಾದ ದಿನಾಂಕ | 24.02.2023. |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ಮರಳನ್ನು ಮಿತ ದರದಲ್ಲಿ ಜನ ಸಾಮಾನ್ಯರಿಗೆ ತಲುಪಿಸುವಂತೆ ಮಾಡಲು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯಿಂದ ಕೈಗೊಂಡಿರುವ ಕ್ರಮವೇನು: (ಮಾಹಿತಿ ನೀಡುವುದು) | ಸಾರ್ವಜನಿಕ ಹಾಗೂ ಸರ್ಕಾರಿ ನಿರ್ಮಾಣ ಕಾಮಗಾರಿಗಳಿಗೆ ನಿಗದಿತ ಕಡಿಮೆ ದರದಲ್ಲಿ ನಿಯಮಿತವಾಗಿ ಮರಳು ಲಭ್ಯವಾಗುವಂತೆ ಮಾಡಲು, ದಿನಾಂಕ 05.05.2020 ರಂದು ಹೊಸ ಮರಳು ನೀತಿ, 2020 ಹಾಗೂ ತತ್ಸಂಬಂಧ ದಿನಾಂಕ 01.12.2021 ರಂದು ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2021 ನ್ನು ಜಾರಿಗೊಳಿಸಲಾಗಿರುತ್ತದೆ.<br>ಸದರಿ ತಿದ್ದುಪಡಿ ನಿಯಮಗಳ ಪ್ರಮುಖಾಂಶಗಳು ಈ ಕೆಳಕಂಡಂತಿರುತ್ತವೆ.<br>• ನದಿ ಪಾತ್ರಗಳಲ್ಲಿ ಮರಳು ಗಣಿಗಾರಿಕೆ ಸೇರಿದಂತೆ ಹೆಚ್ಚುವರಿಯಾಗಿ I, II, III ಮತ್ತು ಉನ್ನತ ಶ್ರೇಣಿಯ ಹಳ್ಳಗಳ ಪಾತ್ರಗಳಲ್ಲಿ ಹಾಗೂ ಅಣೆಕಟ್ಟು / ಜಲಾಶಯ / ಬ್ಯಾರೇಜ್‌ಗಳು ಮತ್ತು ಸದರಿ ಹಿನ್ನೀರಿನ ಪ್ರದೇಶಗಳಲ್ಲಿ ಹೂಳಿನೊಂದಿಗೆ ದೊರೆಯುವ ಮರಳನ್ನು ತೆಗೆದು ಸಾರ್ವಜನಿಕ ಹಾಗೂ ಸರ್ಕಾರಿ ನಿರ್ಮಾಣ ಕಾಮಗಾರಿಗಳಿಗೆ ಪೂರೈಕೆ ಮಾಡಲು ಅವಕಾಶ ಕಲ್ಪಿಸಲಾಗುತ್ತಿದೆ.<br>• ಗ್ರಾಮ ಪಂಚಾಯಿತಿ ವತಿಯಿಂದ I, II ಮತ್ತು III ನೇ ಶ್ರೇಣಿಯ ಹಳ್ಳಗಳ ಪಾತ್ರಗಳಲ್ಲಿ ತೆಗೆಯುವ ಪ್ರತಿ ಮೆಟ್ರಿಕ್ ಟನ್ ಮರಳಿಗೆ ₹ 300/- ಗಳ ಕಡಿಮೆ ಬೆಲೆಯನ್ನು ನಿಗದಿಪಡಿಸಿ, ಮರಳನ್ನು ಸಾರ್ವಜನಿಕ ನಿರ್ಮಾಣ ಕಾಮಗಾರಿಗಳಿಗೆ ನೀಡಲಾಗುತ್ತಿದೆ.<br>• ಅದರಂತೆ, ಪ್ರಸ್ತುತ, ರಾಜ್ಯದ ಗ್ರಾಮ ಪಂಚಾಯಿತಿ ವ್ಯಾಪ್ತಿಗಳಲ್ಲಿ 353 ಮರಳು ಬ್ಲಾಕ್ ಗಳನ್ನು ಗುರುತಿಸಿ, 300 ಮರಳು ಬ್ಲಾಕ್ ಗಳಿಗೆ ಆಯಾ ಜಿಲ್ಲಾ ಮರಳು ಸಮಿತಿಯಿಂದ ಅಧಿಸೂಚನೆ ಹೊರಡಿಸಲಾಗಿರುತ್ತದೆ.<br>• ಈ ಪೈಕಿ 246 ಮರಳು ಬ್ಲಾಕ್ ಗಳಿಗೆ ಕಾರ್ಯಾದೇಶ ನೀಡಿದ್ದು, 76 ಮರಳು ಬ್ಲಾಕ್ ಗಳು ಕಾರ್ಯ ನಿರ್ವಹಿಸುತ್ತಿರುತ್ತವೆ. |

- ಸದರಿ ಮರಳು ಬ್ಲಾಕ್ ಗಳಿಂದ 2022-23 ನೇ ಸಾಲಿನಿಂದ ಇಲ್ಲಿಯವರೆಗೆ 18,090 ಮೆಟ್ರಿಕ್ ಟನ್ ಮರಳನ್ನು ಸ್ಥಳೀಯ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ನೀಡಲಾಗಿರುತ್ತದೆ.
- IV, V ಮತ್ತು VI ನೇ ಶ್ರೇಣಿಯ ಹೊಳೆ / ನದಿಗಳಲ್ಲಿ ಲಭ್ಯವಿರುವ ಮರಳನ್ನು ಮತ್ತು ಅಣೆಕಟ್ಟು / ಜಲಾಶಯ / ಬ್ಯಾರೇಜ್‌ಗಳು ಮತ್ತು ಸದರಿ ಹಿನ್ನೀರಿನ ಪ್ರದೇಶಗಳಲ್ಲಿ ತೆಗೆದು ವಿಲೇವಾರಿ ಮಾಡುವ ಪ್ರತಿ ಮೆಟ್ರಿಕ್ ಟನ್ ಮರಳಿಗೆ ₹ 700/- ಗಳ ಕಡಿಮೆ ದರವನ್ನು ನಿಗದಿಪಡಿಸಲಾಗಿರುತ್ತದೆ.
- ಪ್ರಸ್ತುತ IV, V ಮತ್ತು ಉನ್ನತ ಶ್ರೇಣಿಯ ಹಳ್ಳ/ನದಿಗಳ ಪಾತ್ರಗಳಲ್ಲಿ ಮೆ|| ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ ಇವರಿಗೆ 56 ಮತ್ತು ಮೆ|| ಕರ್ನಾಟಕ ಸ್ಟೇಟ್ ಮಿನರಲ್ ಕಾರ್ಪೊರೇಶನ್ ಲಿಮಿಟೆಡ್ ಇವರಿಗೆ 38 ಮರಳು ಬ್ಲಾಕ್ ಗಳಲ್ಲಿ ಗಣಿಗಾರಿಕೆ ನಡೆಸಲು ಅವಕಾಶ ಕಲ್ಪಿಸಲಾಗಿರುತ್ತದೆ.
- ಈ ಪೈಕಿ ಮೆ|| ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ ದಿಂದ ಹಾವೇರಿ ಹಾಗೂ ರಾಯಚೂರು ಜಿಲ್ಲಾ ವ್ಯಾಪ್ತಿಯಲ್ಲಿ ತಲಾ 01 ಮರಳು ಬ್ಲಾಕ್ ನಲ್ಲಿ ಗಣಿಗಾರಿಕೆ ನಡೆಸಿ, ಸ್ಟಾಕ್ ಯಾರ್ಡ್ ನಲ್ಲಿ ಮರಳನ್ನು ಸಂಗ್ರಹಿಸಲಾಗುತ್ತಿದ್ದು, ಸದರಿ ಮರಳನ್ನು ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ನೀಡಲು ಕ್ರಮ ವಹಿಸಲಾಗುವುದು.
- ಮೆ|| ಕರ್ನಾಟಕ ಸ್ಟೇಟ್ ಮಿನರಲ್ ಕಾರ್ಪೊರೇಶನ್ ಲಿಮಿಟೆಡ್ ವತಿಯಿಂದ ದಕ್ಷಿಣ ಕನ್ನಡ ಜಿಲ್ಲೆಯ ಅದ್ಯಪಾಡಿ ಮತ್ತು ಶಂಭೂರು ಮತ್ತು ಉಡುಪಿ ಜಿಲ್ಲೆಯ ಸೌಪರ್ಣಿಕ ಕಿಂಡಿ ಅಣೆಕಟ್ಟು ಹಿನ್ನೀರಿನ ಪ್ರದೇಶದಲ್ಲಿ ಹೂಳಿನೊಂದಿಗೆ ದೊರೆತಿರುವ ಒಟ್ಟು 1,11,769 ಮೆಟ್ರಿಕ್ ಟನ್ ಮರಳಿನಲ್ಲಿ 88,191 ಮೆಟ್ರಿಕ್ ಟನ್ ಮರಳನ್ನು ಜಿಲ್ಲೆಯ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಮರಳು ಪೂರೈಕೆ ಮಾಡಲಾಗಿರುತ್ತದೆ.
- ಸಾರ್ವಜನಿಕರ ಮನೆ ಬಾಗಿಲಿಗೆ ಮರಳು ತಲಪಿಸುವ ಸಂಬಂಧ ಮರಳನ್ನು ಪಡೆಯಲು ಆನ್‌ಲೈನ್ ಬುಕಿಂಗ್ ವ್ಯವಸ್ಥೆ ಕಲ್ಪಿಸಲಾಗಿರುತ್ತದೆ.
- ಪಟ್ಟಾ ಜಮೀನಿನಲ್ಲಿ ಮರಳು ಗಣಿಗಾರಿಕೆಗೆ ಅವಕಾಶ ಕಲ್ಪಿಸಲಾಗಿದ್ದು, ಅದರಂತೆ ಪಟ್ಟಾ ಜಮೀನುಗಳಲ್ಲಿ 125 ಮರಳು ಗಣಿಗಾರಿಕೆ ಲೈಸನ್ಸ್ ಗಳನ್ನು ಮಂಜೂರು ಮಾಡಲಾಗಿರುತ್ತದೆ.
- ಮುಂದುವರೆದು, ರಾಜ್ಯದಲ್ಲಿ ಎಂ-ಸ್ಯಾಂಡ್ ಉತ್ಪಾದನೆ ಯನ್ನು ಪ್ರೋತ್ಸಾಹಿಸುವ ಸಂಬಂಧ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ಕ್ಕೆ ಅಗತ್ಯ ತಿದ್ದುಪಡಿ ತರಲಾಗಿರುತ್ತದೆ.

ಮೇಲ್ಕಂಡಂತೆ, ರಾಜ್ಯದಲ್ಲಿ ಸಾರ್ವಜನಿಕ ಹಾಗೂ ಸರ್ಕಾರಿ ನಿರ್ಮಾಣ ಕಾಮಗಾರಿಗಳಿಗೆ ನಿಗದಿತ ಕಡಿಮೆ ದರದಲ್ಲಿ ಮರಳು ಪೂರೈಕೆ ಮಾಡಲು ಸರ್ಕಾರದಿಂದ ಕ್ರಮ ವಹಿಸಲಾಗಿರುತ್ತದೆ.

| | | |
|---|---|---|
| ಆ) | ದಕ್ಷಿಣ ಕನ್ನಡ ಜಿಲ್ಲೆಯ ಬಡ ಮತ್ತು ಮಧ್ಯಮ ವರ್ಗದವರಿಗೆ ಮರಳು ಹಂಚಿಕೆ ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ಮಾಹಿತಿ ನೀಡುವುದು) | • ಹೊಸ ಮರಳು ನೀತಿ, 2020 ಹಾಗೂ ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2021 ರಂತೆ ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯ I, II & III ಶ್ರೇಣಿಯ ಹಳ್ಳಗಳ ಪಾತ್ರಗಳಲ್ಲಿ ಗ್ರಾಮ ಪಂಚಾಯಿತಿ ಮೂಲಕ ವಿಲೇವಡಿಸಲು 05 ಮರಳು ನಿಕ್ಷೇಪ ಪ್ರದೇಶಗಳಿಗೆ ಕಾರ್ಯಾದೇಶ ನೀಡಲಾಗಿದ್ದು, ಒಂದು ನಿಕ್ಷೇಪ ಪ್ರದೇಶದಲ್ಲಿ ಈಗಾಗಲೇ ಮರಳು ತೆಗೆದು ಪ್ರತಿ ಮೆಟ್ರಿಕ್ ಟನ್ ಗೆ ₹ 300/- ರ ನಿಗದಿತ ದರದಂತೆ ಸ್ಥಳೀಯ ಕಾಮಗಾರಿಗಳಿಗೆ ವಿಲೇವಾರಿ ಮಾಡಲಾಗುತ್ತಿದೆ.<br>• ಮುಂದುವರೆದು, ಮ॥ ಕರ್ನಾಟಕ ಸ್ಟೇಟ್ ಮಿನರಲ್ ಕಾರ್ಪೊರೇಶನ್ ಲಿಮಿಟೆಡ್ ವತಿಯಿಂದ ಮಂಗಳೂರು ತಾಲ್ಲೂಕಿನ ಅದ್ಯಪಾಡಿ ಮತ್ತು ಬಂಟ್ವಾಳ ತಾಲ್ಲೂಕಿನ ಶಂಭೂರು ಕಿಂಡಿ ಅಣೆಕಟ್ಟು ಹಿನ್ನೀರಿನ ಪ್ರದೇಶದಲ್ಲಿ ಹೂಳಿನೊಂದಿಗೆ ದೊರೆತಿರುವ 1,01,980 ಮೆಟ್ರಿಕ್ ಟನ್ ಮರಳಿನ ಪೈಕಿ 80,617 ಮೆಟ್ರಿಕ್ ಟನ್ ಮರಳನ್ನು ಪ್ರತಿ ಮೆಟ್ರಿಕ್ ಟನ್ ಗೆ ನಿಗದಿತ ದರ ₹ 700/- ರಂತೆ ಜಿಲ್ಲೆಯ ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಮರಳನ್ನು ನೀಡಲಾಗಿರುತ್ತದೆ.<br>• ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯ ಉನ್ನತ ಶ್ರೇಣಿಯ ಹಳ್ಳ / ನದಿಗಳ ಪಾತ್ರಗಳಲ್ಲಿ ಸಾರ್ವಜನಿಕ ಟೆಂಡರ್-ಕಂ-ಹರಾಜು ಮೂಲಕ ಸಾಂಪ್ರದಾಯಿಕ ಮರಳು ತೆಗೆಯುವ ವ್ಯಕ್ತಿಗಳಿಗೆ ಮಂಜೂರು ಮಾಡಲಾಗಿರುವ 17 ಮರಳು ಗುತ್ತಿಗೆ ಪ್ರದೇಶಗಳು ಕಾರ್ಯ ನಿರ್ವಹಿಸುತ್ತಿರುತ್ತವೆ.<br>• ಮುಂದುವರೆದು, ಪ್ರಸ್ತುತ, ಉನ್ನತ ಶ್ರೇಣಿಯ ಹಳ್ಳ/ನದಿಗಳ ಪಾತ್ರಗಳಲ್ಲಿ 18 ಮರಳು ಬ್ಲಾಕ್ ಗಳನ್ನು ಜಿಲ್ಲೆಯ ಸಾಂಪ್ರದಾಯಿಕ ಮರಳು ತೆಗೆಯುವ ವ್ಯಕ್ತಿಗಳಿಗೆ ಟೆಂಡರ್-ಕಂ-ಹರಾಜು ಮೂಲಕ ಹಂಚಿಕೆ ಮಾಡಲಾಗಿದ್ದು, ಈ ಪೈಕಿ 07 ಮರಳು ಬ್ಲಾಕ್ ಗಳಿಗೆ ಈಗಾಗಲೇ ಗುತ್ತಿಗೆಯನ್ನು ಮಂಜೂರು ಮಾಡಲಾಗಿದೆ.ಸದರಿ ಮರಳು ಬ್ಲಾಕ್ ಗಳಲ್ಲಿಯೂ ಸಹ ಗಣಿಗಾರಿಕೆಯನ್ನು ನಡೆಸಲಾಗುತ್ತಿದೆ.<br>• ಉಳಿದ 11 ಮರಳು ಬ್ಲಾಕ್ ಗಳ ಯಶಸ್ವಿ ಬಿಡ್ದುದಾರರುಗಳು ಪರಿಸರ ಅನುಮತಿ ಪತ್ರ ಸಲ್ಲಿಸಿದ ನಂತರ ಸದರಿಯವರಿಗೆ ನಿಯಮಾನುಸಾರ ಗುತ್ತಿಗೆ ಮಂಜೂರು ಮಾಡಲು ಕ್ರಮ ವಹಿಸಲಾಗುವುದು. |

ಸಂಖ್ಯೆ ಸಿಐ 53 ಎಂಎಂಎನ್ 2023

Halappa AA

**(ಆಚಾರ್ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು.



# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 350 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಸಿ.ಎಸ್.ನಿರಂಜನ್‌ಕುಮಾರ್ (ಗುಂಡ್ಲುಪೇಟೆ ವಿಧಾನಸಭಾ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 24.02.2023 |
| ಉತ್ತರಿಸುವವರು | : | ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಗುಂಡ್ಲುಪೇಟೆ ಪುರಸಭೆ ವ್ಯಾಪ್ತಿಯ ವಾರ್ಡ್‌ಗಳಲ್ಲಿ ಖಾಸಗಿ ಆಸ್ತಿಗಳಿಗೆ ಇ-ಸ್ವತ್ತು ಮತ್ತು ಆಸ್ತಿ ಹಕ್ಕು ವರ್ಗಾವಣೆ ಮಾಡಿಕೊಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಗುಂಡ್ಲುಪೇಟೆ ಪುರಸಭೆಯ ಯಾವ ಯಾವ ಬಡಾವಣೆಗಳಲ್ಲಿ ಇ-ಸ್ವತ್ತು ಮತ್ತು ಆಸ್ತಿ ಹಕ್ಕು ವರ್ಗಾವಣೆ ಮಾಡಿಕೊಡುತ್ತಿಲ್ಲ; (ಸಂಪೂರ್ಣ ವಿವರ ನೀಡುವುದು) | ಗುಂಡ್ಲುಪೇಟೆ ಪುರಸಭೆ ವ್ಯಾಪ್ತಿಯ ವಾರ್ಡ್ ನಂ 2ರ ಕೆ.ಎಸ್.ಎನ್ ಬಡಾವಣೆ, ಬರಗಿ ಆಫೀಸ್ ಬಡಾವಣೆ, ಪಿ & ಟಿ ಬಡಾವಣೆ ಮತ್ತು ವಾರ್ಡ್ ನಂ 16ರ ವೀರನಪುರ ಕಾಲೋನಿ ಹಾಗೂ ದ.ರಾ ಬೇಂದ್ರೆ ನಗರ ಬಡಾವಣೆಗಳು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದಿರುವುದಿಲ್ಲ. ಸುತ್ತೋಲೆ ಸಂಖ್ಯೆ: ನಅಇ 7 ಟಿಟಿಪಿ 2017 ದಿ: 22-03-2017 ರಲ್ಲಿ ವಸತಿ ವಿನ್ಯಾಸಗಳಲ್ಲಿನ ನಿವೇಶನಗಳಿಗೆ ಇ-ಸ್ವತ್ತು ಮತ್ತು ಆಸ್ತಿ ಹಕ್ಕು ವರ್ಗಾವಣೆ ಬಗ್ಗೆ ನಿರ್ದೇಶನವಿರುವುದರಿಂದ ಸದರಿ ನಿವೇಶನಗಳಿಗೆ ಇ-ಸ್ವತ್ತು ಮತ್ತು ಆಸ್ತಿ ಹಕ್ಕು ವರ್ಗಾವಣೆ ಮಾಡಿಕೊಡುತ್ತಿರುವುದಿಲ್ಲ. |
| ಇ) | ಇಂತಹ ಸಮಸ್ಯೆಗಳು ಎಷ್ಟು ನಗರ ಮತ್ತು ಪಟ್ಟಣಗಳಲ್ಲಿವೆ; (ವಿವರ ನೀಡುವುದು) | ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆಯದಿರುವ ವಸತಿ ವಿನ್ಯಾಸಗಳಲ್ಲಿರುವ ನಿವೇಶನಗಳಿಗೆ ಖಾತಾ ನೀಡಲಾಗುತ್ತಿಲ್ಲ. ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯಾಗಿರುವ ವಿನ್ಯಾಸಗಳಲ್ಲಿರುವ ನಿವೇಶನಗಳಿಗೆ ಖಾತಾ ನೀಡಲಾಗುತ್ತಿದೆ. |

| | | |
|---|---|---|
| ಈ) | ಈ ಸಮಸ್ಯೆಗಳಿಗೆ ಶಾಶ್ವತ ಪರಿಹಾರ ಕಂಡುಕೊಳ್ಳಲು ಸರ್ಕಾರದ ಮುಂದಿರುವ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು) | ಸ್ಥಳೀಯ ಯೋಜನಾ ಪ್ರದೇಶ ಘೋಷಣೆಯಾದ ಪ್ರದೇಶಗಳಲ್ಲಿ ಬಂದಿರುವ ಅನಧಿಕೃತ ಬೆಳವಣಿಗೆಗಳನ್ನು ಸಕ್ರಮಗೊಳಿಸುವ ಸಂಬಂಧ ಸರ್ಕಾರವು ಅಧಿಸೂಚನೆ ಸಂಖ್ಯೆ: ನಅಇ 556 ಮೈಅಪ್ರಾ 2013 (1) ದಿನಾಂಕ: 28-05-2014ರಲ್ಲಿ ಅಕ್ರಮ-ಸಕ್ರಮ ನಿಯಮಗಳನ್ನು ಜಾರಿಗೆ ತಂದಿರುತ್ತದೆ. ಸದರಿ ನಿಯಮಗಳಿಗೆ ಘನ ಸರ್ವೋಚ್ಛ ನ್ಯಾಯಾಲಯವು ದಿನಾಂಕ: 13-01-2017ರ ಆದೇಶದಲ್ಲಿ ದಿನಾಂಕ: 28-05-2014 ರಂದು ಸರ್ಕಾರ ಹೊರಡಿಸಿರುವ ಅಕ್ರಮ-ಸಕ್ರಮ ನಿಯಮಗಳಡಿ ಸ್ವೀಕರಿಸಲಾಗುವ ಅರ್ಜಿಗಳನ್ನು ಪರಿಶೀಲಿಸದಂತೆ ಹಾಗೂ ಕರ್ನಾಟಕ ಉಚ್ಛನ್ಯಾಯಾಲಯವು ದಿನಾಂಕ: 19-03-2015ರಂದು ನೀಡಿರುವ ಮಧ್ಯಂತರ ತಡೆಯಾಜ್ಞೆಯನ್ನು ಮುಂದಿನ ತೀರ್ಪಿನವರೆಗೂ ಮುಂದುವರೆಸುವಂತೆ ಆದೇಶ ನೀಡಿರುತ್ತದೆ. ಅಕ್ರಮ-ಸಕ್ರಮ ನಿಯಮಗಳು ಜಾರಿಗೆ ಬಂದಲ್ಲಿ ಅನಧಿಕೃತ ಅಭಿವೃದ್ಧಿಗಳನ್ನು ಸಕ್ರಮಗೊಳಿಸುವ ಬಗ್ಗೆ ಪರಿಶೀಲಿಸಬಹುದಾಗಿದೆ. |

ಸಂಖ್ಯೆ: ನಅಇ 49 ಜಿಇಎಲ್ 2023 (ಇ)

ಎನ್.ನಾಗರಾಜ್ (ಎಂ.ಟಿ.ಬಿ)
ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ವಲಯ ಉದ್ಯಮಗಳ ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 693

ಸದಸ್ಯರ ಹೆಸರು : ಶ್ರೀ. ಕೃಷ್ಣಾರೆಡ್ಡಿ.ಎಂ. (ಚಿಂತಾಮಣಿ)

ಉತ್ತರಿಸಬೇಕಾದ ದಿನಾಂಕ : 24-02-2023

ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಚಿಂತಾಮಣಿ ತಾಲ್ಲೂಕು, ಅಂಬಾಜಿದುರ್ಗ ಹೋಬಳಿ, ಚಿಕ್ಕಕೊಂಡ್ರುಹಳ್ಳಿ ಗ್ರಾಮದ ನಿವಾಸಿ ಹಾಗೂ ಅಂಗನವಾಡಿ ಕಾರ್ಯಕರ್ತೆಯಾದ ಅಲವೇಲಮ್ಮ ಕೋಂ ಮಂಜುನಾಥ್ ರವರು ಓಂಶಕ್ತಿ, ಸ್ತ್ರೀಶಕ್ತಿ ಸಂಘ, ಶ್ರೀ ವೆಂಕಟೇಶ್ವರ ಸ್ತ್ರೀಶಕ್ತಿ ಸಂಘ ಹಾಗೂ ಶ್ರೀ ಸಾಯಿ ಸ್ತ್ರೀಶಕ್ತಿ ಸಂಘ ಎಂಬ ಹೆಸರಿನಲ್ಲಿ ಸಂಘಗಳನ್ನು ಸ್ಥಾಪಿಸಿ, ಸಂಘದ ಹೆಸರಿನಲ್ಲಿ ನಕಲಿ ದಾಖಲೆಗಳನ್ನು ಸೃಷ್ಟಿಸಿ ಲಕ್ಷಾಂತರ ರೂಪಾಯಿಗಳನ್ನು ಹೆಚ್.ಡಿ.ಎಫ್.ಸಿ ಬ್ಯಾಂಕ್, ಚಿಕ್ಕಬಳ್ಳಾಪುರ ಮುಖಾಂತರ ಡ್ರಾ ಮಾಡಿಕೊಂಡ ಸಲುವಾಗಿ ಅಲವೇಲಮ್ಮ ಕೋಂ ಮಂಜುನಾಥ್ ವಿರುದ್ಧ ಆರಕ್ಷಕ ವೃತ್ತ ನಿರೀಕ್ಷಕರ ಕಛೇರಿ, ಚಿಂತಾಮಣಿ ಇಲ್ಲಿ ದೂರನ್ನು ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ. | ಸರ್ಕಾರದ ಗಮನಕ್ಕೆ ಬಂದಿದ್ದಲ್ಲಿ, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗಿದೆಯೇ? (ವಿವರ ನೀಡುವುದು) | ಚಿಂತಾಮಣಿ ಪೊಲೀಸ್ ಠಾಣೆಯಲ್ಲಿ ಎಫ್.ಐ.ಆರ್ ಸಂಖ್ಯೆ: 0444/2022 ದಿನಾಂಕ: 06.12.2022 ರಂದು ದೂರು ದಾಖಲಿಸಲಾಗಿದೆ. ನ್ಯಾಯಾಲಯದ ತೀರ್ಪಿನಂತೆ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು. |

**ಸಂಖ್ಯೆ:ಮಮಇ 55 ಐಸಿಡಿ 2023**

Halappa

**(ಆಚಾರ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 694 |
| ವಿಧಾನಸಭಾ ಸದಸ್ಯರ ಹೆಸರು | : | ಶ್ರೀ ಕೃಷ್ಣಾರೆಡ್ಡಿ ಎಂ. (ಚಿಂತಾಮಣಿ) |
| ಉತ್ತರಿಸುವವರು | : | ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು |
| ಉತ್ತರಿಸುವ ದಿನಾಂಕ | : | 24.02.2023 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕೈಗಾರಿಕಾ ನೀತಿ 2020-25ರ ಅನುಬಂಧ-4 ರಲ್ಲಿನ ಉತ್ತೇಜನ ಮತ್ತು ರಿಯಾಯಿತಿಗಳಿಗೆ ಅರ್ಹವಲ್ಲದ ಕೈಗಾರಿಕಾ ಚಟುವಟಿಕೆಗಳು/ ಕೈಗಾರಿಕೆಗಳ ಪಟ್ಟಿಯಲ್ಲಿ ತಿದ್ದುಪಡಿ ತಂದು, ಹೈಡ್ರಾಲಿಕ್ ಪ್ರೆಸ್ ಬ್ರಿಕ್ಸ್ (ಮಡ್ ಬ್ರಿಕ್ಸ್) ತಯಾರಿಸಲು ಹೈಡ್ರಾಲಿಕ್ ಯಂತ್ರೋಪಕರಣಗಳನ್ನು ಉಪಯೋಗಿಸಿ ಕೊಂಡು ಉತ್ಪಾದನೆ ಮಾಡುವುದರಿಂದ ಗ್ರಾಮೀಣ ಪ್ರದೇಶದಲ್ಲಿ ಉದ್ಯೋಗಗಳನ್ನು ಸೃಷ್ಟಿಸಲು ಕ್ರಮ ಕೈಗೊಳ್ಳಲಾಗಿದೆಯೇ; | ಕೈಗಾರಿಕಾ ನೀತಿ 2020-25 ರಡಿ ಅನುಬಂಧ-4 ರ ಉತ್ತೇಜನ ಮತ್ತು ರಿಯಾಯಿತಿಗಳಿಗೆ **ಅರ್ಹವಲ್ಲದ ಕೈಗಾರಿಕೆಗಳ ಪಟ್ಟಿ**ಯಲ್ಲಿ ಕ್ರಮ ಸಂಖ್ಯೆ 12 ರಲ್ಲಿ- "ಸಿಮೆಂಟ್ ಹಾಲೋ/ಸಾಲಿಡ್ ಬ್ಲಾಕ್ಸ್, ವೈರ್ ಕಟ್ ಬ್ರಿಕ್ಸ್, ಹಾರುಬೂದಿ ಇಟ್ಟಿಗೆ, ರಿಫ್ರಾಕ್ಟರಿ ಇಟ್ಟಿಗೆಗಳನ್ನು ಹೊರತುಪಡಿಸಿ ಇಟ್ಟಿಗೆ ಉತ್ಪಾದನಾ ಉದ್ಯಮಗಳು" ಇರುತ್ತದೆ.<br><br>ಈ ವಿಷಯವಾಗಿ ಹೈಡ್ರಾಲಿಕ್ ಪ್ರೆಸ್ ಬ್ರಿಕ್ಸ್ (ಮಡ್ ಬ್ರಿಕ್ಸ್) ತಯಾರಿಸುವ ಚಟುವಟಿಕೆಯನ್ನು ಅರ್ಹ ಕೈಗಾರಿಕಾ ಚಟುವಟಿಕೆಗಳಡಿ ಸೇರಿಸಲು ದಿನಾಂಕ:06.06.2022ರಂದು ನಡೆದ 122ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿ ಸಭೆಯಲ್ಲಿ ಚರ್ಚಿಸಲಾಗಿದೆ.<br><br>ಮುಂದುವರೆದಂತೆ, ಸದರಿ ಸಭೆಯ ತೀರ್ಮಾನದನ್ವಯ ಕೈಗಾರಿಕಾ ನೀತಿ 2020-25 ರಡಿ ಅರ್ಹ ಕೈಗಾರಿಕೆಗಳ ಪಟ್ಟಿಯಲ್ಲಿ ಹೈಡ್ರಾಲಿಕ್ ಪ್ರೆಸ್ ಬ್ರಿಕ್ಸ್ (ಮಡ್ ಬ್ರಿಕ್ಸ್) ತಯಾರಿಸುವ ಚಟುವಟಿಕೆಯನ್ನು ಸೇರ್ಪಡೆ ಮಾಡುವ ಬಗ್ಗೆ ಸರ್ಕಾರದ ಪರಿಶೀಲನೆಯಲ್ಲಿದೆ. |
| ಆ | ಒಂದು ವೇಳೆ ಕ್ರಮ ಕೈಗೊಂಡಿದ್ದಲ್ಲಿ ಅದು ಯಾವ ಹಂತದಲ್ಲಿದೆ ಹಾಗೂ ಇದರಿಂದ ಎಷ್ಟು ಉದ್ಯೋಗ ಸೃಷ್ಟಿಯಾಗಲಿದೆ? (ಜಿಲ್ಲಾವಾರು) | |

ಸಿಐ 48 ಎಸ್‌ಪಿಐ 2023

(ಡಾ. ಮುರುಗೇಶ ಆರ್. ನಿರಾಣಿ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

# ಕರ್ನಾಟಕ ವಿಧಾನ ಸಭೆ

**ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ.**

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 696**

**ಉತ್ತರಿಸಬೇಕಾದ ದಿನಾಂಕ : 24-02-2023**

**ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು**

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕೊಡಗು ಜಿಲ್ಲೆಯಲ್ಲಿ ಎಷ್ಟು ಸಹಕಾರ ಸಂಘಗಳಿವೆ ಹಾಗೂ ಎಷ್ಟು ಸಹಕಾರ ಸಂಘಗಳಲ್ಲಿ ಅವ್ಯವಹಾರ ನಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆ; (ಮಾಹಿತಿ ನೀಡುವುದು). | ಕೊಡಗು ಜಿಲ್ಲೆಯಲ್ಲಿ ಒಟ್ಟು 341 ಸಹಕಾರ ಸಂಘಗಳು ದಿನಾಂಕ:31.03.2022 ರ ಅಂತ್ಯಕ್ಕೆ ನೋಂದಣಿಯಾಗಿದ್ದು ಈ ಪೈಕಿ,<br><br>**ಕಾರ್ಯನಿರತ**: 308; **ಸ್ಥಗಿತ**: 13; **ಸಮಾಪನೆ**: 20; **ಒಟ್ಟು**: 341<br><br>ಕೊಡಗು ಜಿಲ್ಲೆಯಲ್ಲಿ 2015 ರಿಂದ 2022 ರವರೆಗೆ ಲೆಕ್ಕಪರಿಶೋಧನಾ ವೇಳೆಯಲ್ಲಿ ಒಟ್ಟು 19 ವಿವಿಧ ಸಹಕಾರ ಸಂಘಗಳಲ್ಲಿ ದುರುಪಯೋಗ ಪ್ರಕರಣಗಳು ನಡೆದಿರುವುದು ಇಲಾಖೆಯ ಗಮನಕ್ಕೆ ಬಂದಿರುತ್ತದೆ, ಸಂಘವಾರು ಮಾಹಿತಿಯನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| (ಆ) | ಬಂದಿದ್ದಲ್ಲಿ, ಅವ್ಯವಹಾರ ನಡೆಸಿದವರ ಮೇಲೆ ಸರ್ಕಾರ ಏನು ಕ್ರಮ ಕೈಗೊಂಡಿದೆ (ವಿವರ ನೀಡುವುದು). | ಅವ್ಯವಹಾರದಲ್ಲಿ ಭಾಗಿಯಾಗಿರುವ ಸಂಬಂಧಪಟ್ಟ ಸಹಕಾರ ಸಂಘಗಳ ಸಿಬ್ಬಂದಿ ಮತ್ತು ಆಡಳಿತ ಮಂಡಳಿ ವಿರುದ್ಧ ಸಹಕಾರ ಅಧಿನಿಯಮ 1959 ಕಲಂ 69/70 ರಡಿ ಪ್ರಕರಣ ದಾಖಲಿಸಿ, ವಿಚಾರಣೆ ನಡೆಸಲಾಗುತ್ತಿದೆ ಮತ್ತು ಸಂಘದ ಹಂತದಲ್ಲಿ ಸಿವಿಲ್ ಮತ್ತು ಕ್ರಿಮಿನಲ್ ಕ್ರಮ ಕೈಗೊಳ್ಳಲಾಗಿರುತ್ತದೆ. ಸಂಘವಾರು ಮಾಹಿತಿಯನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| (ಇ) | ಅವ್ಯವಹಾರದಲ್ಲಿ ಭಾಗಿಯಾಗಿ ಸರ್ಕಾರಕ್ಕೆ ಹಣವನ್ನು ಮರುಪಾವತಿಸಿದ ಅಧ್ಯಕ್ಷರುಗಳು ನಿರ್ದೇಶಕರುಗಳು ಸಹಕಾರ ಸಂಘಗಳ ಚುನಾವಣೆಯಲ್ಲಿ ಎಷ್ಟು ವರ್ಷಗಳ ಕಾಲ ಸ್ಪರ್ಧಿಸುವಂತಿಲ್ಲ? (ವಿವರ ನೀಡುವುದು). | ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29(ಸಿ) 8 ರನ್ವಯ ಸಂಘದ ಅಧ್ಯಕ್ಷರು, ನಿರ್ದೇಶಕರುಗಳನ್ನು ಐದು ವರ್ಷಗಳ ಅವಧಿಯವರೆಗೆ ಸಹಕಾರ ಸಂಘದ ಯಾವುದೇ ಪದವಿಯನ್ನು ಹೊಂದದಂತೆ ಅನರ್ಹಗೊಳಿಸಬಹುದು. |

**ಕಡತ ಸಂಖ್ಯೆ: ಸಿಒ 23 ಪಿಎಂಸಿ 2023**

**(ಎಸ್. ಟಿ. ಸೋಮಶೇಖರ್)**
**ಸಹಕಾರ ಸಚಿವರು**

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. (ಮಡಿಕೇರಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 696 ಕ್ಕೆ ಉತ್ತರ

ಅನುಬಂಧ–1

ಕೊಡಗು ಜಿಲ್ಲೆಯ 01.04.2015 ರಿಂದ 31.03.2022 ರವರೆಗೆ ಲೆಕ್ಕ ಪರಿಶೋಧನಾ ವೇಳೆಯಲ್ಲಿ ಕಂಡುಹಿಡಿಯಲಾದ ಹಣ ದುರುಪಯೋಗದ ಪ್ರಕರಣಗಳು

| ಕ್ರ.ಸಂ | ಸಂಘದ ಪ್ರವರ್ಗ ಮತ್ತು ಹೆಸರು | ತಾಲ್ಲೂಕು | ಹಣ ದುರುಪಯೋಗದ ವರ್ಷ | ದುರುಪಯೋಗದ ಸ್ವರೂಪ | | ದುರುಪಯೋಗವಾದ ಮೊಬಲಗು | ಕೈಗೊಂಡ ಕ್ರಮದ ವಿವರ | | ಷರಾ |
|---|---|---|---|---|---|---|---|---|---|
| | | | | ನಗದು | ದಾಸ್ತಾನು | | ಸಿವಿಲ್ | ಕ್ರಿಮಿನಲ್ | |
| 1 | 2 | 3 | 4 | 5 | 6 | 7 | 8 | 9 | 10 |
| 1 | ದಿ ಮರ್ಚೆಂಟ್ಸ್ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್ | ವಿರಾಜಪೇಟೆ | 2015–16 | 1,00,000.00 | – | 1,00,000.00 | - | - | ದುರುಪಯೋಗದ ಪೂರ್ಣ ಮೊತ್ತ ವಸೂಲಾಗಿರುತ್ತದೆ. |
| 2 | ಗುಡ್ಡೆಹೊಸೂರು ಹಾಲು ಉತ್ಪಾದಕರ ಸಹಕಾರ ಸಂಘ | ಸೋಮವಾರಪೇಟೆ | 2013–14 | 8,32,305.70 | – | 8,32,305.70 | ಕಲಂ69 | 0049/2016 | ವಿಚಾರಣೆ ಹಂತದಲ್ಲಿದೆ |
| | | | 2014–15 | 1,52,964.38 | 10,500.00 | 1,63,464.38 | | | |
| 3 | ನಂಜರಾಯಪಟ್ಟಣ ಪ್ರಾಥಮಿಕ ಕೃಷಿ ಪತ್ತಿನ ಸ.ಸಂ | ಸೋಮವಾರಪೇಟೆ | 2016–17 | 1,62,661.00 | 69,88,170.15 | 71,50,831.15 | ಕಲಂ69 | | ವಿಚಾರಣೆ ಹಂತದಲ್ಲಿದೆ |
| 4 | ನಂ.2773ನೇ ಚೆಯ್ಯಂಡಾಣೆ ಪ್ರಾ.ಕೃ.ಪ.ಸಂ | ಮಡಿಕೇರಿ | 2016–17 | – | 10,94,135.00 | 10,94,135.00 | ಕಲಂ69 | | |
| | | | | 50,000.00 | – | 50,000.00 | ಕಲಂ69 | | ಮಾನ್ಯ ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ ಬೆಂಗಳೂರುರಲ್ಲಿ ವಿಚಾರಣಾ ಹಂತದಲ್ಲಿ ಇರುತ್ತದೆ. |
| 5 | ಮಾಲ್ದಾರೆ ಬಾಡಗ ಪ್ರಾಥಮಿಕ ಕೃಷಿ ಪತ್ತಿನ ಸ.ಸಂ | ವಿರಾಜಪೇಟೆ | 2016–17 | – | 58,07,645.00 | 58,07,645.00 | ಕಲಂ 70ರಡಿ ಪ್ರಕರಣ ದಾಖಲಾಗಿದ್ದು, ವಿಚಾರಣೆ ಹಂತದಲ್ಲಿರುತ್ತದೆ. | ಎಫ್ಐಆರ್ ನಂ.0042/2017 | ಮಾನ್ಯ ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ ಬೆಂಗಳೂರುರಲ್ಲಿ ವಿಚಾರಣಾ ಹಂತದಲ್ಲಿ ಇರುತ್ತದೆ. |
| 6 | ಪಾಲಿಬೆಟ್ಟ ಕೃಷಿ ಪತ್ತಿನ ಸಹಕಾರ ಸಂಘ ನಿ., ಪಾಲಿಬೆಟ್ಟ | ವಿರಾಜಪೇಟೆ | 2017–18 | 51,67,071.00 | – | 51,67,071.00 | ಕಲಂ 70ರಡಿ ಪ್ರಕರಣ ದಾಖಲಾಗಿದ್ದು, ವಿಚಾರಣೆ ಹಂತದಲ್ಲಿರುತ್ತದೆ. | ಎಫ್ಐಆರ್ ನಂ. 0160/2018 | ಭಾಗಶಃ ವಸೂಲಾಗಿದೆ. |
| 7 | ಚೆಯ್ಯಾಂಡಾಣೆ ಪ್ಯಾಕ್ಸ್ | ಮಡಿಕೇರಿ | 2017–18 | 537495 | 11006805.6 | 11544300.6 | ಕಲಂ69ರಡಿ ಪ್ರಕರಣ ದಾಖಲಾಗಿದ್ದು, ವಿಚಾರಣೆ ಹಂತದಲ್ಲಿರುತ್ತದೆ. | ಎಫ್ಐಆರ್ ನಂ 0010/2019 | ಕಲಂ 64ರ ವಿಚಾರಣೆಗೆ ಆದೇಶಿಸಲಾಗಿದೆ. |
| 8 | ನಂ 281 ನೇ ವಿರಾಜಪೇಟೆ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ ವಿರಾಜಪೇಟೆ | ವಿರಾಜಪೇಟೆ | 2016–17 | ಸರಕು | – | 9230467.63 | ಕಲಂ 69 | | ಪ್ರಕರಣವು ಅಮಲ್ಜಾರಿ ಕ್ರಮದಲ್ಲಿರುತ್ತದೆ. |
| 9 | ಚಂಬೆಬೆಳ್ಳೂರು ಸಹಕಾರ ಧವಸ ಭಂಡಾರ | ಮಡಿಕೇರಿ | 2015–16 | 31,496.00 | | 31,496.00 | ಕಲಂ 69 | | ವಸೂಲಾತಿಯಾಗಿರುತ್ತದೆ. |
| 10 | ಕೆದಮುಳ್ಳೂರು ಪ್ಯಾಕ್ಸ್ | ವಿರಾಜಪೇಟೆ | 2019–20 | 35,52,922.00 | – | 35,52,922.00 | ಕಲಂ69ರಡಿ ಪ್ರಕರಣ ದಾಖಲಾಗಿದ್ದು, ವಿಚಾರಣೆ ಹಂತದಲ್ಲಿರುತ್ತದೆ. | ಎಫ್ಐಆರ್ ನಂ 0114/2021 | ವಿಚಾರಣೆ ಹಂತದಲ್ಲಿದೆ |
| | | | | 2,37,495.00 | – | 2,37,495.00 | | | |
| 11 | ಗೋಣಿಕೊಪ್ಪ ಎಪಿಸಿಎಂಎಸ್ | ವಿರಾಜಪೇಟೆ | 2019–20 | – | 1,31,400.00 | 1,31,400.00 | ಕಲಂ 70 | | ವಸೂಲಾತಿಯಾಗಿರುತ್ತದೆ. |

| | | | | | | | | | |
|---|---|---|---|---|---|---|---|---|---|
| 12 | ಶುಂಠಿಕೊಪ್ಪ ಪ್ಯಾಕ್ಸ್ | ಸೋಮವಾರಪೇಟೆ | 2019-20 | 13,72,514.00 | - | 13,72,514.00 | ಕಲಂ69ರಡಿ ಪ್ರಕರಣ ದಾಖಲಾಗಿದ್ದು, ವಿಚಾರಣೆ ಹಂತದಲ್ಲಿರುತ್ತದೆ. | ಎಫ್‌ಐಆರ್ ನಂ 0087/2021 | ವಿಚಾರಣೆ ಹಂತದಲ್ಲಿದೆ |
| 13 | ಚೆಟ್ಟಳ್ಳಿ ಪ್ಯಾಕ್ಸ್ | ಸೋಮವಾರಪೇಟೆ | 2019-20 | 200000.00 (ನಿ.ಠೇವಣಿ) | - | 2,00,000.00 | ಕಲಂ69ರಡಿ ಪ್ರಕರಣ ದಾಖಲಾಗಿದ್ದು ವಿಚಾರಣೆಯು ಮುಕ್ತಾಯವಾಗಿರುತ್ತದೆ. | - | ಪೂರ್ಣ ವಸೂಲಾತಿಯಾಗಿರುತ್ತದೆ. |
| 14 | ಸೋಮವಾರಪೇಟೆ ತಾ. ಗಿರಿಜನ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿ., ಬಸವನಹಳ್ಳಿ | ಸೋಮವಾರಪೇಟೆ | 2018-19<br>2019-20 | 10,20,380.00<br>13,66,475.00 | -<br>- | 10,20,380.00<br>13,66,475.00 | -<br>- | -<br>- | ದಿನಾಂಕ 18.07.2022 ರಂದು ಪೂರ್ಣ ಮೊತ್ತ ವಸೂಲಾಗಿರುತ್ತದೆ. |
| 15 | ಚಿಕ್ಕಳುವಾರ ಹಾಲು ಉತ್ಪಾದಕರ ಸ.ಸಂ | ಸೋಮವಾರಪೇಟೆ | 2019-20 | 123758.35 | 1,53,908.00 | 2,77,666.35 | - | - | ಪ್ರಾಥಮಿಕ ವಿಚಾರಣಾ ಹಂತದಲ್ಲಿರುತ್ತದೆ. |
| 16 | ಕೊಡಗು ಗುತ್ತಿಗೆದಾರರ ಸಹಕಾರ ಸಂಘ ನಿ., | ಮಡಿಕೇರಿ | 2019-20 | 8,82,935.00<br>32,10,935.00 | -<br>- | 8,82,935.00<br>32,10,935.00 | | | ವಸೂಲಾತಿಗೆ ಸಂಘದ ಆಡಳಿತ ಮಂಡಳಿಯವರು ಸಂಘದ ಸಿಬ್ಬಂಧಿಯ ವಿರುದ್ಧ ವಸೂಲಾತಿ ಕ್ರಮಕೈಗೊಳ್ಳಲು ಆಡಳಿತ ಮಂಡಳಿಗೆ ನಿರ್ದೇಶನ ನೀಡಲಾಗುವುದು. |
| 17 | ಮರಗೋಡು ಪ್ರಾ.ಕೃ.ಪ.ಸ.ಸಂ | ಮಡಿಕೇರಿ | 2018-19 | - | 5945046.50<br>1089304.74 | 5945046.50<br>1089304.74 | ಕಲಂ 69ರಡಿ ಪ್ರಕರಣ ದಾಖಲಾಗಿದ್ದು, ವಿಚಾರಣೆ ಹಂತದಲ್ಲಿರುತ್ತದೆ. | ಎಫ್‌ಐಆರ್ ನಂ. 26/2020-21 ರಂತೆ ಕಲಂ 409/ಐ34 | ಕಲಂ 64ರ ವಿಚಾರಣೆಗೆ ಆದೇಶಿಸಲಾಗಿದೆ. |
| 18 | ಕೊಡಗು ಗುತ್ತಿಗೆದಾರರ ಸಹಕಾರ ಸಂಘ ನಿ., ಮಡಿಕೇರಿ | ಮಡಿಕೇರಿ | 2020-21 | 5,92,540.00 | - | 5,92,540.00 | | | ವಸೂಲಾತಿಗೆ ಸಂಘದ ಆಡಳಿತ ಮಂಡಳಿಯವರು ಸಂಘದ ಸಿಬ್ಬಂಧಿಯ ವಿರುದ್ಧ ವಸೂಲಾತಿ ಕ್ರಮಕೈಗೊಳ್ಳಲು ಆಡಳಿತ ಮಂಡಳಿಗೆ ನಿರ್ದೇಶನ ನೀಡಲಾಗುವುದು. |
| 19 | ಜನಪದ ಪತ್ತಿನ ಸಹಕಾರ ಸಂಘ ನಿ., ಗೋಣಿಕೊಪ್ಪ | ವಿರಾಜಪೇಟೆ | 2020-21 | 50,091.00<br>50,091.00 | -<br>- | 1,00,182.00 | | | ವಸೂಲಾತಿಗೆ ಸಂಘದ ಆಡಳಿತ ಮಂಡಳಿಯವರು ಸಂಘದ ಸಿಬ್ಬಂಧಿಯ ವಿರುದ್ಧ ವಸೂಲಾತಿ ಕ್ರಮಕೈಗೊಳ್ಳಲು ಆಡಳಿತ ಮಂಡಳಿಗೆ ನಿರ್ದೇಶನ ನೀಡಲಾಗುವುದು. |
| | ಒಟ್ಟು | | | | | 5,59,84,441.05 | | | |

Ashwini.Y.T

ಸಹಕಾರ ಸಂಘಗಳ ಉಪ ನಿಬಂಧಕರು ಹಾಗೂ
ನಿಬಂಧಕರ ಪತ್ರಾಂಕಿತ ಸಹಾಯಕರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 697
ಸದಸ್ಯರ ಹೆಸರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ. (ಮಡಿಕೇರಿ)
ಉತ್ತರಿಸಬೇಕಾದ್ದ ದಿನಾಂಕ : 24-02-2023
ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಿಂದ ಬಿದ್ದ ಮಳೆಯಿಂದ ಮಡಿಕೇರಿ ನಗರ ಸಭೆಯ ರಸ್ತೆಗಳು ತುಂಬಾ ಹಾಳಾಗಿದ್ದು, ಸಂಚಾರಕ್ಕೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ |
| ಆ) | ಬಂದಿದ್ದಲ್ಲಿ, ಸರ್ಕಾರ ವಿಶೇಷ [illegible] ರೂ.100.00 [illegible] ವಿಶೇಷ [illegible] ಕೃಪೆ [illegible] ಮತ್ತು ಅನುದಾನ ನೀಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಮುಖ್ಯಮಂತ್ರಿಗಳ [illegible] ನಗರೋತ್ಥಾನ(ಮುನಿಸಿಪಾಲಿಟಿ) ಯೋಜನೆ (ಹಂತ-4) ರಡಿ ಮಡಿಕೇರಿ ನಗರಸಭೆಗೆ ರೂ.4000.00 ಲಕ್ಷಗಳನ್ನು ಹಂಚಿಕೆ ಮಾಡಲಾಗಿದ್ದು, ರೂ.3500.00 ಲಕ್ಷಗಳ [illegible] 2019-20 [illegible] ಅನುದಾನ [illegible] ಅನುದಾನದ [illegible] 40 [illegible] ಕಾಮಗಾರಿಗಳನ್ನು [illegible] ಅದರಂತೆ ರೂ.45.53 ಲಕ್ಷಗಳ [illegible] ಕಾಮಗಾರಿಗಳಿಗೆ ಮೀಸಲಿರಿಸಿ, [illegible] .33 ಲಕ್ಷಗಳನ್ನು ವೆಚ್ಚ ಮಾಡಿದೆ.<br>ಮಡಿಕೇರಿ ನಗರಸಭಾ ವ್ಯಾಪ್ತಿಯಲ್ಲಿ [illegible] ರಸ್ತೆಗಳ ಅಭಿವೃದ್ಧಿಗಾಗಿ, ಎಸ್.ಎಫ್.ಸಿ ವಿಶೇಷ ಅನುದಾನ ಕೋರಿ ಪ್ರಸ್ತಾವನೆಯು ಸರ್ಕಾರದಲ್ಲಿ ಸ್ವೀಕೃತಗೊಂಡ ನಂತರ ಕ್ರಮಕೈಗೊಳ್ಳಲಾಗುವುದು ಹಾಗೂ 2019-20 ಸಾಲಿನ ಎಸ್.ಎಫ್.ಸಿ ವಿಶೇಷ ಅನುದಾನದಡಿ ಮಂಜೂರಾಗಿರುವ ರೂ.400.00 ಲಕ್ಷಗಳ ಅನುದಾನದಡಿ ರೂ.198.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಒಟ್ಟು 14 ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿರುತ್ತದೆ. |

ಸಂಖ್ಯೆ:ನಅಇ 75 ಎಸ್‌ಎಫ್‌ಸಿ 2023

[ಬಿ.ಎ.ಬಸವರಾಜ]
ನಗರಾಭಿವೃದ್ಧಿ ಸಚಿವರು

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 698
ಸದಸ್ಯರ ಹೆಸರು : ಶ್ರೀ.ಅಪ್ಪಚ್ಚು(ರಂಜನ್) ಎಂ.ಪಿ. (ಮಡಿಕೇರಿ)
ಉತ್ತರಿಸಬೇಕಾದ್ದ ದಿನಾಂಕ : 24-02-2023
ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಮತ್ತು ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕುಶಾಲನಗರ ಪುರಸಭೆಯ ರಸ್ತೆಗಳು ತುಂಬಾ ಹಾಳಾಗಿ ಸಂಚಾರಕ್ಕೆ ತೊಂದರೆಯಾಗುತ್ತಿರುವುದು ನಿಜವೇ; | ಹೌದು |
| ಆ) | ಅನುದಾನದ ಕೊರತೆಯಿಂದ ರಸ್ತೆಗಳನ್ನು ದುರಸ್ಥಿಪಡಿಸಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br><br>ಅನುದಾನ ಕೊರತೆಯಿರುವ ರಸ್ತೆಗಳನ್ನು ದುರಸ್ಥಿಪಡಿಸಲು ಕೆಳಕಂಡ ಯೋಜನೆಗಳಡಿ ಅನುದಾನವನ್ನು ಹಂಚಿಕೆ ಮಾಡಿ ಬಿಡುಗಡೆಗೊಳಿಸಲಾಗಿರುತ್ತದೆ.<br><br>**ಎಸ್.ಎಫ್.ಸಿ ಮುಕ್ತನಿಧಿಃ**<br><br>ಕ್ರ ಸಂ / ಸಾಲಿನ ವಿವರ / ಮಂಜೂರಾದ ಅನುದಾನ (ರೂ.ಲಕ್ಷಗಳಲ್ಲಿ) / ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ)<br>1 / 2019-20 / 86.00 / 64.50<br>2 / 2020-21 / 31.69 / 31.69<br>3 / 2021-22 / 41.00 / 41.00<br><br>**ಎಸ್.ಎಫ್.ಸಿ ವಿಶೇಷ ಅನುದಾನಃ**<br><br>ಕ್ರ ಸಂ / ಸಾಲಿನ ವಿವರ / ಮಂಜೂರಾದ ಅನುದಾನ (ರೂ.ಲಕ್ಷಗಳಲ್ಲಿ) / ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ)<br>1 / 2019-20 / 100.00 / 100.00<br><br>ಸರ್ಕಾರದಿಂದ ವಿವಿಧ ಯೋಜನೆಯಡಿ ಕುಶಾಲನಗರಕ್ಕೆ ಲಭ್ಯವಾಗುವ ಅನುದಾನದಿಂದ ಆಯಾ ಯೋಜನೆಯ ಮಾರ್ಗಸೂಚಿಯನ್ವಯ ಕುಶಾಲನಗರ ಪುರಸಭೆಯ ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಅನುದಾನ ಲಭ್ಯತೆಗೆ ಅನುಗುಣವಾಗಿ ಹಂತಹಂತವಾಗಿ ಲಭ್ಯವಿರುವ ಅನುದಾನದಲ್ಲಿ ಕೈಗೊಳ್ಳಲಾಗುತ್ತಿದೆ |

**ಎಸ್.ಎಫ್.ಸಿ ಮುಕ್ತನಿಧಿಃ**

| ಕ್ರ ಸಂ | ಸಾಲಿನ ವಿವರ | ಮಂಜೂರಾದ ಅನುದಾನ (ರೂ.ಲಕ್ಷಗಳಲ್ಲಿ) | ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|
| 1 | 2019-20 | 86.00 | 64.50 |
| 2 | 2020-21 | 31.69 | 31.69 |
| 3 | 2021-22 | 41.00 | 41.00 |

**ಎಸ್.ಎಫ್.ಸಿ ವಿಶೇಷ ಅನುದಾನಃ**

| ಕ್ರ ಸಂ | ಸಾಲಿನ ವಿವರ | ಮಂಜೂರಾದ ಅನುದಾನ (ರೂ.ಲಕ್ಷಗಳಲ್ಲಿ) | ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|
| 1 | 2019-20 | 100.00 | 100.00 |

| | | |
|---|---|---|
| | | **<u>14ನೇ ಹಣಕಾಸು ಆಯೋಗದ ಅನುದಾನ:</u>**<br><br>14ನೇ ಹಣಕಾಸು ಆಯೋಗದ ಅನುದಾನದಡಿ ಕುಶಾಲನಗರ ಪುರಸಭೆಗೆ 2019-20ನೇ ಸಾಲಿನ ಮೂಲ ಅನುದಾನ ರೂ.148.00 ಲಕ್ಷಗಳಲ್ಲಿ ಗರಿಷ್ಠ ಶೇ.40ರಷ್ಟು ಮೀರದಂತೆ ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಮಾರ್ಗಸೂಚಿಯಲ್ಲಿ ಸೂಚಿಸಲಾಗಿದ್ದು, ಕುಶಾಲನಗರ ಪುರಸಭೆಯು ಸದರಿ ಅನುದಾನದಲ್ಲಿ ರೂ.22.20 ಲಕ್ಷಗಳನ್ನು ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ಮೀಸಲಿರಿಸಿ, ಅನುದಾನ ರೂ.22.16 ಲಕ್ಷಗಳನ್ನು ವೆಚ್ಚ ಮಾಡಲಾಗಿದೆ.<br><br>**<u>15ನೇ ಹಣಕಾಸು ಆಯೋಗದ ಅನುದಾನ:</u>**<br><br>15ನೇ ಹಣಕಾಸು ಆಯೋಗದ ಅನುದಾನದಡಿ ಕುಶಾಲನಗರ ಪುರಸಭೆಗೆ ಹಂಚಿಕೆಯಾದ ಶೇ.40ರಷ್ಟು ಮುಕ್ತ ಅನುದಾನದಲ್ಲಿ ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಮಾರ್ಗಸೂಚಿಯಲ್ಲಿ ಸೂಚಿಸಲಾಗಿದೆ. ಅದರಂತೆ, ಕುಶಾಲನಗರ ಪುರಸಭೆಗೆ 15ನೇ ಹಣಕಾಸು ಆಯೋಗದ ಮುಕ್ತ ಅನುದಾನದಲ್ಲಿ 2020-21 ಮತ್ತು 2021-22ನೇ ಸಾಲಿನಲ್ಲಿ ಒಟ್ಟು ರೂ.18.40 ಲಕ್ಷಗಳನ್ನು ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ಮೀಸಲಿರಿಸಿ, ಅನುದಾನ ರೂ.17.77 ಲಕ್ಷಗಳನ್ನು ವೆಚ್ಚ ಮಾಡಲಾಗಿದೆ.<br><br>**<u>ನಗರೋತ್ಥಾನ ಯೋಜನೆ:</u>**<br><br>ನಗರೋತ್ಥಾನ (ಮುನಿಸಿಪಾಲಿಟಿ) ಹಂತ-3ರ ಯೋಜನೆಯಡಿ ಹಾಗೂ ಮುಖ್ಯಮಂತ್ರಿಗಳ ಅಮೃತ ನಗರೋತ್ಥಾನ ಯೋಜನೆ (ಹಂತ-4) ಯಡಿ ಕುಶಾಲನಗರ ಪುರಸಭೆ ವ್ಯಾಪ್ತಿಯಲ್ಲಿ ವಿವಿಧ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳಿಗೆ ಅನುಮೋದನೆ ನೀಡಲಾಗಿದ್ದು, ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದ್ದು, ವಿವರಗಳನ್ನು **ಅನುಬಂಧ-01**ರಲ್ಲಿ ಲಗತ್ತಿಸಿದೆ. |
| ಇ) | ಬಂದಿದ್ದಲ್ಲಿ, ಕನಿಷ್ಟ ಅಂದಾಜು ರೂ.50.00 ಕೋಟಿಗಳ ವಿಶೇಷ ಅನುದಾನ ನೀಡಿದ್ದಲ್ಲಿ, ಇಲ್ಲಿನ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಸಾಧ್ಯವಾಗುವುದರಿಂದ; ಈ ಬಗ್ಗೆ ಸರ್ಕಾರ ಯಾವ ಕ್ರಮ ಕೈಗೊಳ್ಳುವುದು? (ಪೂರ್ಣ ವಿವರ ನೀಡುವುದು) | ರಸ್ತೆ ಅಭಿವೃದ್ಧಿಗಾಗಿ ಕುಶಾಲನಗರ ಪುರಸಭೆಯಿಂದ ಅಗತ್ಯ ಅನುದಾನಕ್ಕೆ ಪ್ರಸ್ತಾವನೆಯನ್ನು ಪಡೆದು ಸರ್ಕಾರಕ್ಕೆ ಸಲ್ಲಿಸುವುದಾಗಿ ಯೋಜನಾ ನಿರ್ದೇಶಕರು ಜಿಲ್ಲಾ ನಗರಾಭಿವೃದ್ಧಿ ಕೋಶ ಮಡಿಕೇರಿ ರವರು ವರದಿ ಮಾಡಿರುತ್ತಾರೆ. ಸರ್ಕಾರದಲ್ಲಿ ಪ್ರಸ್ತಾವನೆ ಸ್ವೀಕೃತಗೊಂಡ ನಂತರ ಕ್ರಮಕೈಗೊಳ್ಳುವುದು. |

ಸಂಖ್ಯೆ:ನಅಇ 72 ಎಸ್‌ಎಫ್‌ಸಿ 2023

[ಎನ್. ನಾಗರಾಜ್ (ಎಂ.ಟಿ.ಬಿ)]
ಪೌರಾಡಳಿತ ಮತ್ತು ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ವಲಯ ಉದ್ಯಮಗಳ ಸಚಿವರು

## ಅನುಬಂಧ-01

(ರೂ.ಲಕ್ಷಗಳಲ್ಲಿ)

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ವರ್ಷ | ಹಂಚಿಕೆಯಾದ ಅನುದಾನ | ಬಿಡುಗಡೆಯಾದ ಅನುದಾನ | ರಸ್ತೆ ಅಭಿವೃದ್ಧಿಗಾಗಿ ಮೀಸಲಿರಿಸಿದ ಅನುದಾನ | ರಸ್ತೆ ಅಭಿವೃದ್ಧಿಗಾಗಿ ವೆಚ್ಚ ಮಾಡಿದ ಅನುದಾನ |
|---|---|---|---|---|---|---|
| 01 | ನಗರೋತ್ಥಾನ (ಮುನಿಸಿಪಾಲಿಟಿ) ಹಂತ-3 | 2019-20 | 300.00 | 80.84 | 113.79 | 71.81 |
| | | 2020-21 | | 0.00 | | |
| | | 2021-22 | | 52.37 | | |
| 02 | ಮುಖ್ಯ ಮಂತ್ರಿಗಳ ಅಮೃತ ನಗರೋತ್ಥಾನ ಯೋಜನೆ (ಹಂತ-4) | 2021-22 | 500.00 | 0.00 | 198.78 | 0.00 |
| | ಪ್ರೋತ್ಸಾಹಧನ | 2022-23 | 100.00 | 0.00 | 100.00 | 0.00 |

ಮುಖ್ಯ ಅಧಿಯುಕ್ತರರು
ಪೌರಾಡಳಿತ ನಿರ್ದೇಶನಾಲಯ
ಬೆಂಗಳೂರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 699
ಸದಸ್ಯರ ಹೆಸರು : ಶ್ರೀ ಸಂಗಮೇಶ್ವರ್ ಬಿ.ಕೆ (ಭದ್ರಾವತಿ)
ಉತ್ತರಿಸಬೇಕಾದ ದಿನಾಂಕ : 24-02-2023
ಉತ್ತರಿಸುವ ಸಚಿವರು : ನಗರಾಭಿವೃದ್ಧಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಭದ್ರಾವತಿ ನಗರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಭದ್ರಾವತಿ ನಗರ ಸಭೆಗೆ ಜಲ ಜೀವನ್ ಮಿಷನ್ ಅಮೃತ್-2.0 ಯೋಜನೆಗಳನ್ನು ಅನುಷ್ಠಾನ ಮಾಡಲು ಈಗಾಗಲೇ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಈ ಪ್ರಸ್ತಾವನೆಯು ಪ್ರಸ್ತುತ ಯಾವ ಹಂತದಲ್ಲಿದೆ; (ಮಾಹಿತಿ ನೀಡುವುದು) | ಸರ್ಕಾರದ ಸೇರ್ಪಡೆ ಆದೇಶ ಸಂಖ್ಯೆ:ನಅಇ 14 ಸಿಎಸ್‌ಎಸ್ 2022, ದಿನಾಂಕ:18.05.2022ರನ್ವಯ ಅಮೃತ್ 2.0 ಯೋಜನೆಯನ್ನು 1 ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆ ಇರುವ 287 ನಗರ/ ಪಟ್ಟಣಗಳಲ್ಲಿ ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.<br><br>ಭದ್ರಾವತಿ ನಗರಸಭೆಯ ಜನಸಂಖ್ಯೆಯು 1 ಲಕ್ಷಕ್ಕಿಂತ ಹೆಚ್ಚಾಗಿರುವ ಕಾರಣ, ಅಮೃತ್ 2.0 ಯೋಜನೆಯಡಿ ಆಯ್ಕೆಯಾಗಿರುವುದಿಲ್ಲ. ಭದ್ರಾವತಿ ನಗರಸಭೆಯು ಅಮೃತ್ 1.0 ಯೋಜನೆಯಡಿ ಆಯ್ಕೆಯಾಗಿರುತ್ತದೆ. |
| ಆ) | ಈ ಯೋಜನೆಯನ್ನು ಯಾವಾಗ ಅನುಷ್ಠಾನಗೊಳಿಸಲಾಗುವುದು? (ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ. |

ಸಂಖ್ಯೆ:ನಅಇ 33 ಸಿಎಸ್‌ಎಸ್ 2023

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು
(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **700**
ಸದಸ್ಯರ ಹೆಸರು : **ಡಾ. ಅವಿನಾಶ್ ಉಮೇಶ್ ಜಾಧವ್ (ಚಿಂಚೋಳಿ)**
ಉತ್ತರಿಸುವ ದಿನಾಂಕ : **24/02/2023**
ಉತ್ತರಿಸುವ ಸಚಿವರು : **ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು**

| | ಪ್ರಶ್ನೆ | ಉತ್ತರ |
|---|---|---|
| ಅ | ಕಲಬುರಗಿ ಜಿಲ್ಲೆ ಕಾಳಗಿ ಗ್ರಾಮ ಪಂಚಾಯಿತಿಯನ್ನು ಪಟ್ಟಣ ಪಂಚಾಯಿತಿಯನ್ನಾಗಿ ಯಾವಾಗ ಮೇಲ್ದರ್ಜೆಗೇರಿಸಲಾಯಿತು; (ಆದೇಶದ ಪ್ರತಿ ಒದಗಿಸುವುದು). | ಕಲಬುರಗಿ ಜಿಲ್ಲೆಯ ಕಾಳಗಿ ಗ್ರಾಮ ಪಂಚಾಯಿತಿಯನ್ನು ಅಧಿಸೂಚನೆ ಸಂಖ್ಯೆ:ನಅಇ 135 ಎಂಎಲ್ಆರ್ 2016; ದಿನಾಂಕ:10/01/2019 ರನ್ವಯ ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲಾಗಿರುತ್ತದೆ. ಅಧಿಸೂಚನೆಯ ಪ್ರತಿಯನ್ನು ಲಗತ್ತಿಸಿದೆ. |
| ಆ | ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಿದ ನಂತರ ಕಾಳಗಿ ಪಟ್ಟಣ ಪಂಚಾಯಿತಿಯ ಸಿಬ್ಬಂದಿಯನ್ನು ಪೌರಸೇವಾ ವೃಂದದಲ್ಲಿ ಮಿಲೀನಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಈ ಕುರಿತು ಸರ್ಕಾರಕ್ಕೆ ಪ್ರಸ್ತಾವನೆ ಯಾವಾಗ ಬಂದಿದೆ; ಬಂದಿದ್ದಲ್ಲಿ ಪ್ರಸ್ತಾವನೆಗೆ ಅನುಮೋದನೆ ನೀಡಲು ವಿಳಂಬವಾಗುವುದಕ್ಕೆ ಕಾರಣಗಳೇನು; | ಕಾಳಗಿ ಪಟ್ಟಣ ಪಂಚಾಯಿತಿಯಲ್ಲಿನ ಗ್ರಾಮ ಪಂಚಾಯಿತಿ ಅವಧಿಯ 08 ನೌಕರರನ್ನು ದಿನಾಂಕ:28/01/2020 ರಂದು ಪೌರಾಡಳಿತ ನಿರ್ದೇಶನಾಲಯದ ಹಂತದಲ್ಲಿ ಆದೇಶ ಹೊರಡಿಸುವ ಮೂಲಕ ಪೌರಸೇವಾ ವೃಂದದಲ್ಲಿ ವಿಲೀನಗೊಳಿಸಲಾಗಿರುತ್ತದೆ.<br>ಪ್ರಸ್ತುತ, ಕಾಳಗಿ ಗ್ರಾಮ ಪಂಚಾಯಿತಿಯು ಪಟ್ಟಣ ಪಂಚಾಯಿತಿಯಾಗಿ ಮೇಲ್ದರ್ಜೆಗೇರಿದ ನಂತರದಲ್ಲಿ ಜಿಲ್ಲಾ ಪಂಚಾಯಿತಿಯಿಂದ ಅನುಮೋದನೆಯಾಗಿರುವ 06 ಗ್ರಾಮ ಪಂಚಾಯಿತಿ ಅವಧಿಯ ನೌಕರರನ್ನು ಪೌರಸೇವಾ ವೃಂದದಲ್ಲಿ ಮಿಲೀನಗೊಳಿಸುವುದಕ್ಕಾಗಿ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ರವರಿಂದ ದಿನಾಂಕ:28/01/2022 ರ ಪತ್ರದನ್ವಯ ಪ್ರಸ್ತಾವನೆ ಸ್ವೀಕೃತವಾಗಿದ್ದು, ನಿಯಮಾನುಸಾರ ಪರಿಶೀಲಿಸಿ, ಆರ್ಥಿಕ ಇಲಾಖೆಯ ಸಹಮತಿಯನ್ನು ಕೋರಲಾಗಿರುತ್ತದೆ. ಆರ್ಥಿಕ ಇಲಾಖೆಯು ಕಾಳಗಿ ಪಟ್ಟಣ ಪಂಚಾಯಿತಿಯಲ್ಲಿನ ಸಿಬ್ಬಂದಿಗೆ ಸಂಬಂಧಿಸಿದಂತೆ ಮಂಜೂರಾದ ಹುದ್ದೆಗಳು, ಖಾಲಿ ಹುದ್ದೆಗಳು, ಜಿಲ್ಲಾ ಪಂಚಾಯಿತಿಯಿಂದ ಅನುಮೋದನೆಗೊಂಡಿರುವ ವಿವರ, ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ಸಿಬ್ಬಂದಿಯ ಮಾಹಿತಿ ಮತ್ತಿತರ ವಿವರಗಳನ್ನು ಒದಗಿಸಲು ಕೋರಿರುವುದರಿಂದ ಮಾಹಿತಿಯನ್ನು ಸಲ್ಲಿಸುವಂತೆ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ರವರಿಗೆ ದಿನಾಂಕ:18/11/2022 ರಂದು ಪತ್ರ ಬರೆಯಲಾಗಿರುತ್ತದೆ. ಸೂಕ್ತ ಮಾಹಿತಿ ಸ್ವೀಕೃತವಾದ ನಂತರ ನಿಯಮಾನುಸಾರ ಪರಿಶೀಲಿಸಿ ಕ್ರಮವಹಿಸಲಾಗುತ್ತದೆ. |
| ಇ | ಕಾಳಗಿ ಪಟ್ಟಣ ಪಂಚಾಯಿತಿಯ ಸಿಬ್ಬಂದಿಯನ್ನು ಪೌರಸೇವಾ ವೃಂದದಲ್ಲಿ ಸೇರ್ಪಡೆ ಮಾಡುವ ಪ್ರಸ್ತಾವನೆಗೆ ಸರ್ಕಾರದಿಂದ ಯಾವ ಕಾಲಮಿತಿಯಲ್ಲಿ ಅನುಮೋದನೆ ನೀಡಲಾಗುವುದು? | |

**ಸಂಖ್ಯೆ:ನಅಇ 04 ಎಲ್ಎಕ್ಯೂ 2023.**

(ಎನ್. ನಾಗರಾಜು (ಎಂ ಟಿ ಬಿ))
ಪೌರಾಡಳಿತ ಮತ್ತು ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

ಅನುಬಂಧ-1

RNI No. KARBIL/2001/47147



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ–III | ಬೆಂಗಳೂರು, ಗುರುವಾರ, ಜನವರಿ ೧೦, ೨೦೧೯ (ಪುಷ್ಯ ೨೦, ಶಕ ವರ್ಷ ೧೯೪೦) | ನಂ. ೨೮ |
|---|---|---|
| Part-III | Bengaluru, Thursday, January 10, 2019 (Pushya 20, Shaka Varsha 1940) | No. 28 |



ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ನಅಇ 136 ಎಂಎಲ್‌ಆರ್ 2016, ಬೆಂಗಳೂರು, ದಿನಾಂಕ: 10.01.2019**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3 ನೇ ಪ್ರಕರಣದೊಂದಿಗೆ ಓದಿಕೊಂಡ 9,349 ಮತ್ತು 355(ಬಿ) ಪ್ರಕರಣದಲ್ಲಿ ಅಗತ್ಯಪಡಿಸಿದಂತೆ ಕಲಬುರ್ಗಿ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಕಾಳಗಿ ಗ್ರಾಮ ಪಂಚಾಯಿತಿಯು ಕಾಳಗಿ ಗ್ರಾಮ, ಲಕ್ಷ್ಮಣ ನಾಯಕ ತಾಂಡಾ, ಕಿಂಡಿ ತಾಂಡಾ, ನಾಮು ನಾಯಕ ತಾಂಡಾ, ಕರಿಕಲ್ಲ ತಾಂಡಾ ಮತ್ತು ದೇವಿಕಲ್ಲ ತಾಂಡಾ ಪ್ರದೇಶಗಳು ಸೇರಿದಂತೆ 'ಗ್ರಾಮ ಪಂಚಾಯತಿ ಪ್ರದೇಶ'ವನ್ನು ಈ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಕಾಳಗಿ 'ಪರಿವರ್ತನಾ ಪ್ರದೇಶ' ವೆಂದು ಉದ್ಘೋಷಿಸಿ, ಸದರಿ ಪರಿವರ್ತನಾ ಪ್ರದೇಶಕ್ಕೆ "ಕಾಳಗಿ ಪಟ್ಟಣ ಪಂಚಾಯಿತಿ"ಯ ಪ್ರದೇಶವೆಂದು ನಿರ್ದಿಷ್ಟಪಡಿಸಲು ಪ್ರಸ್ತಾಪಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇ 136 ಎಂಎಲ್‌ಆರ್ 2016, ದಿನಾಂಕ:23.10.2018 ನ್ನು ದಿನಾಂಕ:23.10.2018ರ ಕರ್ನಾಟಕ ವಿಶೇಷ ರಾಜ್ಯ ಪತ್ರದ ಭಾಗ–3ರ ಸಂಖ್ಯೆ:1417 ರಲ್ಲಿ ಪ್ರಕಟಿಸಿ, ಇದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಂದ ಸದರಿ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿ;

ಸದರಿ ರಾಜ್ಯ ಪತ್ರವನ್ನು ಪ್ರಕಟಿಸಿದ ದಿನಾಂಕದಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿ;

ನಿಗದಿತ ಅವಧಿಯಲ್ಲಿ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿಲ್ಲದಿರುವುದರಿಂದ;

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3 ನೇ ಪ್ರಕರಣದೊಂದಿಗೆ ಓದಿಕೊಂಡ 3, 349 ಮತ್ತು 355(ಬಿ)ರ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಗೌರವಾನ್ವಿತ ರಾಜ್ಯಪಾಲರು ಈ ಕೆಳಗಿನವುಗಳನ್ನು ಗಮನಿಸಿ, ಶೆಡ್ಯೂಲ್–ಬಿ ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಶೆಡ್ಯೂಲ್–ಎ ರಲ್ಲಿ ನಿರ್ದಿಷ್ಟಪಡಿಸಲಾದ ಕಲಬುರ್ಗಿ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಕಾಳಗಿ ಗ್ರಾಮ ಪಂಚಾಯಿತಿಯು ಕಾಳಗಿ ಗ್ರಾಮ, ಲಕ್ಷ್ಮಣ ನಾಯಕ ತಾಂಡಾ, ಕಿಂಡಿ ತಾಂಡಾ, ನಾಮು ನಾಯಕ ತಾಂಡಾ, ಕರಿಕಲ್ಲ ತಾಂಡಾ ಮತ್ತು ದೇವಿಕಲ್ಲ ತಾಂಡಾ ಪ್ರದೇಶಗಳು ಸೇರಿದಂತೆ 'ಗ್ರಾಮ ಪಂಚಾಯತಿ ಪ್ರದೇಶ'ವನ್ನು ಈ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಕಾಳಗಿ 'ಪರಿವರ್ತನಾ ಪ್ರದೇಶ' ವೆಂದು ಹಾಗೂ ಸದರಿ ಪರಿವರ್ತನಾ ಪ್ರದೇಶವನ್ನು 'ಕಾಳಗಿ ಪಟ್ಟಣ ಪಂಚಾಯಿತಿ' ಯ ಪ್ರದೇಶವೆಂದು ಸಹ ಪದನಾಮೀಕರಿಸಿ ಈ ಮೂಲಕ ಉದ್ಘೋಷಿಸಿರುತ್ತಾರೆ–

1. ಅಂಥ ಪ್ರದೇಶದ ಜನಸಂಖ್ಯೆ ಹತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಇಪ್ಪತ್ತು ಸಾವಿರಕ್ಕಿಂತ ಹೆಚ್ಚಿಲ್ಲದ ಹೊರತು;

2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ನಾಲ್ಕುನೂರು ಕಡಿಮೆಯಿಲ್ಲದ ಹೊರತು;
3. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಂಪನಗೌಡ ಮೇಲ್ಸೀಮೆ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

**ಶೆಡ್ಯೂಲ್ – ಎ**

| ಜಿಲ್ಲೆಯ ಹೆಸರು | ತಾಲ್ಲೂಕು | ಗ್ರಾಮ ಪಂಚಾಯಿತಿ ಹೆಸರು | ಗ್ರಾಮಗಳ ವಿವರ | ಮೇಲ್ದರ್ಜೆಗೇರಿಸಿದ ನಂತರ ಒಟ್ಟಾರೆ ಪರಿಗಣಿಸಲ್ಪಡುವ ಪ್ರದೇಶ (ಏರಿಯಾ) (ಚ.ಕಿ.ಮೀ.) |
|---|---|---|---|---|
| ಕಲಬುರ್ಗಿ | ಚಿತ್ತಾಪುರ | ಕಾಳಗಿ | ಕಾಳಗಿ ಗ್ರಾಮ ಪಂಚಾಯಿತಿಯು ಕಾಳಗಿ ಗ್ರಾಮ, ಲಕ್ಷ್ಮಣ ನಾಯಕ ತಾಂಡಾ, ಕಿಂಡಿ ತಾಂಡಾ, ನಾಮು ನಾಯಕ ತಾಂಡಾ, ಕರಿಕಲ್ಲ ತಾಂಡಾ ಮತ್ತು ದೇವಿಕಲ್ಲ ತಾಂಡಾ ಪ್ರದೇಶಗಳನ್ನು ಒಳಗೊಂಡು | 17.43 ಚ.ಕಿ.ಮೀ. |

**ಶೆಡ್ಯೂಲ್ – ಬಿ**

ಉತ್ತರ : ಕಾಳಗಿ ಗ್ರಾಮದ ಸರಹದ್ದಿನ ಸ.ನಂ.175/10 ದಿಂದ ಪ್ರಾರಂಭಗೊಂಡು ದಕ್ಷಿಣ ಮುಖವಾಗಿ ಹೊರಟು ಸ.ನಂ. 219, 220, 240, 242, 253, 232/4 ಕ್ಕೆ ಅಂತ್ಯಗೊಂಡಿರುತ್ತದೆ.

ಪೂರ್ವ: ಕಾಳಗಿ ಗ್ರಾಮದ ಸ.ನಂ.277, 276, 275, 271 ಪ್ರಾರಂಭವಾಗಿ ಕಾಳಗಿ ಗ್ರಾಮದ ನದಿಗೆ ಹೊಂದಿಕೊಂಡಿರುವ ಸ.ನಂ.778, 777, 776, 321, 769, 750, 537, 571, 573, 703 ರ ಸ.ನಂ. ಗೆ ಅಂತ್ಯಗೊಳ್ಳುತ್ತದೆ.

ದಕ್ಷಿಣ: ಸ.ನಂ. 712, 735, 736, 737, 738, 739, 740/2, ಕಾಳಗಿಯಿಂದ ಗೊಟೂರ ಗ್ರಾಮಕ್ಕೆ ಹೋಗುವ ಅಡ್ಡ ರಸ್ತೆಗೆ ಉತ್ತರ ಅಭಿಮುಖವಾಗಿ ಹೊರಟು ಸ.ನಂ.29, 30, 31 ಕಲಬುರಗಿಯಿಂದ ಚಿಂಚೋಳಿ ಮುಖ್ಯ ರಸ್ತೆಗೆ ಹಾದು ಹೋಗುತ್ತದೆ ಮತ್ತು ಮುಂದೆ ಸಾಗಿದಾಗ ಸ.ನಂ.41 ರಿಂದ ಪ್ರಾರಂಭಗೊಂಡು ಸ.ನಂ.42, 44, 65, 66, 67, 68, 69, 70, 73, 74, 75 ಕ್ಕೆ ಅಂತ್ಯಗೊಂಡಿರುತ್ತದೆ.

ಪಶ್ಚಿಮ: ಕಾಳಗಿ ಗ್ರಾಮದ ದೇವಿಕಲ್ಲ ತಾಂಡದ ಮೂಲೆಯಿಂದ ಹೊಂದಿಕೊಂಡಿರುವ ಸ.ನಂ.175/1 ರಿಂದ ಪ್ರಾರಂಭಗೊಂಡು 175/15, 175/14, 175/5, 175/7, 175/8, 175/9, 177, 175/1, 183 ಈಶಾನ್ಯ ಅಭಿಮುಖವಾಗಿ ಲಕ್ಷ್ಮಣ ನಾಯಕ ತಾಂಡದ ಪಕ್ಕದಲ್ಲಿರುವ ಸ.ನಂ.185ಕ್ಕೆ ಗಡಿ ರೇಖೆಗೆ ಅಂತ್ಯಗೊಳ್ಳುತ್ತದೆ.

**ಪಂಪನಗೌಡ ಮೇಲ್ಸೀಮೆ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

**URBAN DEVELOPMENT SECRETARIAT**
**NOTIFICATION**
**No.UDD 136 MLR 2016, Bengaluru, Dated: 10.01.2019**

Whereas the notification of declaring the 'Grama Panchayat Area' of Kalagi including Laxmana Nayak Thanda, Kindi Thanda, Naamu Nayaka Thanda, Karikalla Thanda & Devikalla Thanda area as Transitional area of Kalagi, Kalaburgi District mentioned in the Schedule "A" along with boundaries mentioned in Schedule "B" is hereby declared as the "Transitional Area" of Kalagi and further such area is specified as "Town Panchayat Area" of Kalagi was published as required by Section 9, 349 and 355(B) of the Karnataka Municipalities Act, 1964, vide 'Government notification no:UDD 136 MLR 2016, dated:23.10.2018 by providing thirty days time and was published in part- III, No.1417 Karnataka Gazette Extraordinary, dated:23.10.2018 inviting objections from all persons likely to be affected thereby on or before thirty days from the date of publication of the above notification.

And whereas the notification was made available to the public on the day of publication;

And whereas no objections/suggestions were received within the stipulated time ;

Now, therefore, in exercise of the powers conferred by Section 3, 349 and 355(B) of the Karnataka Municipalities Act, 1964, the Hon'ble Governor, hereby notify the 'Grama Panchayat Area' of Kalagi including Laxmana Nayak Thanda, Kindi Thanda, Naamu Nayaka Thanda, Karikalla Thanda & Devikalla Thanda area as Transitional area of Kalagi mentioned in Schedule-A along with boundaries mentioned in Schedule-B as the "Transitional Area" of Kalagi and further specifying such area to be the "Town Panchayat Area" area of Kalagi, Kalaburgi District , having regard to-

i. The population of such area is not less than ten thousand and not more than Twenty thousand;
ii. The density of population in such area is not less than four hundred inhabitants to one square kilometer of area;
iii. The percentage of employment in non-agricultural activities is not less than fifty per cent of the total employment;

By Order and in the name of the Governor of Karnataka,

**PAMPANAGOUDA MELSEEME**
Under Secretary to Government,
Urban Development Department.

**Schedule – A**

| District | Taluk | Name of Grama Panchayat | Proposed villages to be included (details) | Total Upgraded Area (Square kilometer) |
| --- | --- | --- | --- | --- |
| Kalaburgi | Chittapura | Kalagi Gram Panchayat | Laxmana Nayaka Tanda, Kindi Tanda, Naamu Nayaka Tanda, Karikalla Tanda and Devikalla Tanda | 17.43Sq.KM |

**Schedule - B**

**North:** In the Kalagi Village Divikal Tanda, which adjoin survey no. 175/1, to start from survey no. 175/15, 175/14, 175/5, 175/7, 175/8, 175/8, 175/9, 177, 175/1, 183, it goes toward north west site via Laxman Naik Tanda to end point sy.no. 185.

**East:** Kalgi Village, Boundary line start from 175/10 goes throught south via survey no.219, 220, 2440, 242, 282/4 upto end point.

**South:** Kalgi Village Sy.No. 277, 276, 275, 271, upti Start and the Kalagi Village adjoin river survey No.778, 777, 776, 321, 769, 750, 537, 571, 573, 703, upto end point.

**West:** Kalagi to Gotur Village adjoin road Survey No.712, 735, 736, 737, 738, 739, 740/2, from here it goes throught north from Survey No.29, 30, 31, and pawan Kalaburagi to Chincholi Main Road, point it and it where throught the continue survey no. 41 another survey no.42, 44, 65, 66, 67, 68, 69, 70, 73, 74, 75 end the point.

**PAMPANAGOUDA MELSEEME**
Under Secretary to Government,
Urban Development Department.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಟಿ7) ಪ್ರತಿಗಳು: 100